


# ರುಚಿ

## ಅರೆಬಾಸೆ ಸಂಪ್ರದಾಯದ ಅಡ್‌ಗೆ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.
ಮಡಿಕೇರಿ, ಕೊಡಗು ಜಿಲ್ಲೆ - 571 201

**'RUCHI'**
**Arebhasigara Sampradayada Aduge**
A collection of Recipes in
Arebhase language
Published by
'Karnataka Arebhase Samskrithi
Mathu Sahitya Academy, Madikeri

ಪ್ರಕಟಣೆ : **2017**

ಪ್ರತಿಗಳು : **500**

ಬೆಲೆ : ರೂ. 80/-

ಪುಟಗಳು : 64





ಪ್ರಕಾಶಕರು : ರಿಜಿಸ್ಟ್ರಾರ್
ಕರ್ನಾಟಕ ಅರೆಭಾಷೆ ಸಂಸ್ಕೃತಿ
ಮತ್ತು ಸಾಹಿತ್ಯ ಅಕಾಡೆಮಿ.

**ಪುಸ್ತಕ ದೊರೆಯುವ ಸ್ಥಳ :**

ಕರ್ನಾಟಕ ಅರೆಭಾಷೆ ಸಂಸ್ಕೃತಿ
ಮತ್ತು ಸಾಹಿತ್ಯ ಅಕಾಡೆಮಿ,
ಕಾಫಿ ಕೃಪ ಬಿಲ್ಡಿಂಗ್,
ಮಹಾತ್ಮ ಗಾಂಧಿ ರಸ್ತೆ, ಮಡಿಕೇರಿ.
ದೂ. : 08272-223055

ಮುದ್ರಣ :
ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,
ಮಡಿಕೇರಿ, ಕೊಡಗು
Ph : 08272-224919, 9448135592




# ಅಧ್ಯಕ್ಷರ ಮಾತ್

ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ವತಿಂದ ಬಾಳ ಬೇಡಿಕೆ ಇರ್ವಂತ ನಮ್ಮ ಸಾಂಪ್ರದಾಯಿಕ ಅಡಿಗೆ ಕಾರ್ಯಕ್ರಮನ ಮರಗೋಡುಲಿ ನಡ್ಸಿದ್ದೊ, ಅರೆಬಾಸೆ ಸಂಸ್ಕೃತಿಲಿ ಅಡಿಗೆ ಬಗ್ಗೆ 5 ದಿನ ತರಬೇತಿ ಕಾರ್ಯಾಗಾರ ಶಿಬಿರ ಏರ್ಪಡಿಸಿ 6ನೇ ದಿನ ನಡ್ಸಿದ ಸಮಾರೋಪ ಸಮಾರಂಭಲಿ ದೊಡ್ಡ ಸಂಖ್ಯೆಲಿ ಜನ ಭಾಗವಹ್ಸಿದ್ದೊ.

ಅರೆಭಾಷಿಕ ಗೌಡ ಜನಾಂಗದ ಅಡಿಗೆನ ಸಂಸ್ಕೃತಿ, ಕೃಷಿ ಮತ್ತೆ ಹವಮಾನಕ್ಕೆ ತಕ್ಕಂಗೆ ಪೂರ್ವಜರ್ ತಯಾರಿಸಿಕೊಂಡ್ ಬಂದಳೊ, 5 ದಿನ ತರಭೇತಿಲಿ ಮೊದುವೆ, ಕೃಷಿ, ಶುದ್ದ, ತಿಥಿ, ಹಬ್ಬ ಹರಿದಿನಗಳ್ಲಿ ತಯಾರ್ ಮಾಡ್ದ ಅಡಿಗೆಗಳ ಬಗ್ಗೆ ಕಾರ್ಯಾಗಾರ ಹಂಗೆ ಪ್ರಾತ್ಯಕ್ಷಿಕೆ ಕೊಟ್ಟೊ. ಈ ಕಾರ್ಯಕ್ರಮ ಅದ್ದೂರಿಯಾಗಿ ನಡ್ದ್ ಅಪಾರ ಜನಮನ್ನಣೆ ಗಳ್ಸಿತ್.

ಕಾರ್ಯಕ್ರಮದ ಮುಂದಿನ ಭಾಗ ಆಗಿ ಅಲ್ಲಿ ತಯಾರ್ ಮಾಡ್ದ ತಿಂಡಿ ತೀರ್ಥ ಹಂಗೆ ಕಷಾಯ ನಾಟಿ ಮದ್ದ್‌ಗಳ ಬಗ್ಗೆ ಮುಂದಿನ ಜನಾಂಗಕ್ಕೆ ತಿಳ್ಸಿಕ್ಕಾಗಿ ನಾವು ಈ ಪುಸ್ತಕನ ಪ್ರಕಟಣೆ ಮಾಡ್ತಾ ಒಳೊ. ಆಧುನಿಕ ಮತ್ತೆ ಯಾಂತ್ರಿಕ ಬದ್ಕ್‌ನ ಈ ಕಾಲಘಟ್ಟಲಿ ಪಿಜ್ಜ ಬರ್ಗರ್ ಕುರುಕ್‌ಲ್ ತಿಂಡಿಗೆ ಮಾರ್ ಹೋದಂತ ಯುವ ಜನಾಂಗಕ್ಕೆ ಆರೋಗ್ಯಪೂರ್ಣ ಆದ ಈ ತಡಿಗೆ ದೇಹಕ್ಕೆ ಹಿತ ನಾಲಗೆಗೆ ರುಚಿ ಕೊಟ್ಟದೆಂತೇಳಿ ನನ್ನ ಭಾವನೆ.

ಈ ಕಾರ್ಯಕ್ರಮ ಯಶಸ್ವಿ ಆಕೆ ಹಗಲು ಇರ್ಲ್ ಕಷ್ಟಪಟ್ಟ ಸಂಚಾಲಕ ಅಕಾಡೆಮಿ ಸದಸ್ಯ ಹಂಗೆ ನನ್ನ ಗೆಳೆಯ ಆದ ಮಂದ್ರೀರ ಮೋಹನ್ ದಾಸ್ ಅವ್ಕೆ ವಿಶೇಷ ಅಭಿನಂದನೆ ತಿಳ್ಸ್‌ತಾ ಒಳೆ, ಹಂಗೆ ಕಾರ್ಯಕ್ರಮಕ್ಕೆ ಪೂರ್ಣ ಸಹಕಾರ ಕೊಟ್ಟ ಮರಗೋಡು ಗೌಡ ಸಮಾಜದ ಅಧ್ಯಕ್ಷರ್ ಕಾರ್ಯಕಾರಿ ಮಂಡಳಿಯವ್ಕೆ, ಪುಸ್ತಕ ಸಮಿತಿಯವ್ಕೆ, ಅಕಾಡೆಮಿ ಸದಸ್ಯರ್‌ಗಳಿಗೆ ಕೂಡ ನನ್ನ ಪ್ರೀತಿಯ ಕೃತಜ್ಞತೆ ಸಲ್ಲಿಸ್ತಾವೊಳೆ

– ಕೊಲ್ಯದ ಆರ್. ಗಿರೀಶ್
ಅಧ್ಯಕ್ಷ, ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,
ಮಡಿಕೇರಿ



## ಮುನ್ನುಡಿ

ಅರೆಬಾಸೆ ಸಂಸ್ಕೃತಿನ ಸಾಂಪ್ರದಾಯಿಕ ಅಡುಗೆ ತರಬೇತಿ ಮತ್ತೆ ಪ್ರಾತ್ಯಕ್ಷತೆಂತೇಳುವ ಕಾರ್ಯಕ್ರಮನ ಮರಗೋಡು ಗೌಡ ಸಮಾಜದ ಸಹಯೋಗಲಿ ಒಂದು ವಾರದವರೆಗೆ ಯಶಸ್ವಿಯಾಗಿ ನಡ್ಸಿದೊ.

ಈ ಕಾರ್ಯಕ್ರಮಲಿ ಹಳೇ ಕಾಲಂದ ನಮ್ಮ ಹಿರಿಯರ್, ಹೆಣ್ಮಕ್ಕ ಆಚರಿಸಿಕಂಡ್ ಬಂದಂತ ಹಬ್ಬಹರಿದಿನ, ಮೊದುವೆ, ಕೃಷಿ ಚಟುವಟಿಕೆನ ಸಂದರ್ಬಲಿ ಮಾಡ್ತಿದ್ದ ಅಡ್ಗೆಗಳ ತಯಾರಿಸುವ ಕ್ರಮ, ಅದರ್ಲಿದ್ದ ವಿಶೇಷತೆಗಳ ಬಗ್ಗೆ ಮಾಹಿತಿನ ತರಬೇತುದಾರರ್ ಹೇಳ್ದೊ. ಮರಗೋಡು, ಹೊಸ್ಕೇರಿ, ಐಕೊಳ, ಕಟ್ಟೆಮಾಡ್ ಗ್ರಾಮದ ಹೆಣ್ಮಕ್ಕ ತುಂಬಾ ಕುಸೀಂದ ಭಾಗವಹಿಸಿ ದಿನಕ್ಕೊಬ್ಬರಂಗೆ ಆತಿಥ್ಯ ಕೊಟ್ಟೊ. ಕಡೇ ದಿನ ಅವು ಮಾಡ್ದ ಬೇರೆ ಬೇರೆ ಅಡುಗೆಗಳ ಅಚ್ಚ್‌ಕಟ್ಟಾದ ಪ್ರದರ್ಶನ ಕೂಡ ನಡ್ತ್. ಈ ಎಲ್ಲಾ ವಿಚಾರಗಳ್ನ ಒಟ್ಟ್‌ಗೂಡ್ಸಿ ಕಾರ್ಯಕ್ರಮದ ಮುಂದುವರ್ದ ಭಾಗ ಆಗಿ ಈ ಪುಸ್ತಕನ ಹೊರತರ್ತಾವೊಳೊ.

ಈ ಪುಸ್ತಕಲಿರುವ ಹೆಚ್ಚಿನ ರೆಸಿಪಿನ ತರಬೇತುದಾರರಾಗಿ ಬಂದವು ಮತ್ತೆ ನಮ್ಮ ಸ್ಥಳೀಯರ್ ಕೊಟ್ಟೊ. ಈ ಪುಸ್ತಕಲಿರುವ ಹೆಚ್ಚಿನ ಚಿತ್ರಗ ನಮ್ಮ ಕಾರ್ಯಕ್ರಮಲಿ ಪ್ರದರ್ಶನ ಆದ ಅಡುಗೆನ ಚಿತ್ರಗ. ಈ ಪುಸ್ತಕಲಿ 175 ತರದ ಅಡಿಗೆಗಳ ಪರಿಚಯ ಮಾಡಿಕೊಟ್ಟೊಳೊ. ಈ ಪುಸ್ತಕನ ಪ್ರಕಟಿಸಿಕೆ ಅನುವು ಮಾಡಿಕೊಟ್ಟ ನಮ್ಮ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಅಧ್ಯಕ್ಷ ಶ್ರೀ ಕೊಲ್ಯದ ಗಿರೀಶ್ ಅವ್ಕೂ ಮತ್ತೆ ಎಲ್ಲಾ ಸದಸ್ಯರ್‌ಗೂ ಪುಸ್ತಕ ಸಮಿತಿ ಸದಸ್ಯರ್‌ಗೂ ವಂದನೆ.

ತರಬೇತುದಾರರಾಗಿ ಆಗಮಿಸಿದಂತ ಕುಶಾಲನಗರ ಗೌಡ ಮಹಿಳಾ ಸಂಘ, ಚೇರಂಬಾಣೆ ಗೌಡ ಸಮಾಜದ ಹೆಣ್ಮಕ್ಕ, ಗಾಳಿಬೀಡಿನ ಹೆಣ್ಮಕ್ಕ, ಅವಂದೂರಿನ ಶ್ರಿ ಗೋಪಾಲಕೃಷ್ಣ ಯುವ ಸಂಘದವ್ಕೆ ವಂದನೆಗ.

ಈ ಕಾರ್ಯಕ್ರಮಲಿ ಭಾಗವಹಿಸಿ ಆತಿಥ್ಯ ಕೊಟ್ಟ್ ಕಾರ್ಯಕ್ರಮಲಿ ಸಕ್ರಿಯಾಗಿ ಪಾಲ್ಗೊಂಡ ಎಲ್ಲಾ ಹೆಣ್ಮಕ್ಕಳಿಗೆ ವಂದನೆಗ. ಆ ಕಾರ್ಯಕ್ರಮಕ್ಕೆ ಅಡುಗೆಗೆ ಬೇಕಾದ ಸಾಮಾಗ್ರಿಗಳ್‌ನ ಮತ್ತೆ ಅಡುಗೆ ಮನೆ ನಿರ್ಮಿಸಿಕೊಟ್ಟ ಶ್ರೀ ಬಿದ್ರುಪಣೆ ಗಣೇಶ್ ಸ್ವಾಗತ್ ಕೇಟರಿಂಗ್ ಇವ್ಕೆ ಧನ್ಯವಾದಗ.

ಅದ್ದೂರಿ ಮೆರವಣಿಗೆ ಮೂಲಕ ಮೆರ್‌ಗ್ ಕೊಟ್ಟ್ ಕಾರ್ಯಕ್ರಮನ ಯಶಸ್ಸ್‌ಗೊಳ್ಸಿದ ಮರಗೋಡು ಗೌಡಸಮಾಜದ ಅಧ್ಯಕ್ಷ ಶ್ರೀ ದೇವಜನ ನಾಣಯ್ಯ ಮತ್ತೆ ಆಡಳಿತ ಮಂಡಳಿಯವ್ಕೆ ವಂದನೆಗ. ಒಂದು ವಾರದವರೆಗೆ ನಡ್ದ ತರಬೇತಿ ಮತ್ತೆ ಪ್ರಾತ್ಯಕ್ಷತೆ ನಿರ್ವಹಿಸಿದ ಶ್ರೀ ಕಟ್ಟೆಮನೆ ಸೋನಾಜಿತ್‌ರವರಿಗೆ ಕೃತಜ್ಞತೆಗ.

ಆ ಕಾರ್ಯಕ್ರಮನ ಪುಸ್ತಕ ರೂಪಲಿ ಹೊರತಾಕೆ ನನ್ನ ಜೊತೆ ಸಹಕರಿಸಿದಂತ ಹಿರಿಯ ಸಾಹಿತಿ ಶ್ರೀಮತಿ ಬೈತಡ್ಕ ಜಾನಕಿ ಮತ್ತೆ ಶ್ರೀಮತಿ ಕಡ್ಲೇರ ತುಳಸಿ ಮೋಹನ್ ಅವುಕೆ ಕೃತಜ್ಞತೆ ತಿಳಿಸ್ತಾವೊಳೆ. ಈ ಪುಸ್ತಕಕ್ಕೆ ಬೇಕಾದ ಫೋಟೋ ಮತ್ತೆ ಲಾಯ್ಕಾದ ಮುಖಪುಟ ವಿನ್ಯಾಸ ಮಾಡ್ದ ಪ್ರದೀಪ್, ಪ್ರಸನ್ನ ಸ್ಟುಡಿಯೊ ಇವ್ಕೂ ಪುಸ್ತಕನ ಪೊರ್ಲಾಗಿ ಮುದ್ರಣ ಮಾಡ್ದ ಶ್ರೀ ಕೃಷ್ಣ ಪ್ರಿಂಟರ್ಸ್‌ನ ಮಾಲೀಕ ಮತ್ತೆ ಸಿಬ್ಬಂದಿಯವ್‌ಕೆ ಕೃತಜ್ಞತೆಗ.

– ಮಂದ್ರೀರ ಮೋಹನ್‌ದಾಸ್
ಕಾರ್ಯಕ್ರಮ ಸಂಚಾಲಕರ್
ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ

ಸೂಸ್‌ಲಿಟ್ಟ್
ಚುಂಡೆಪಲ್ಯ
ತೋಡುಕೆಸದ ಸಾರ್
ಕರಿಕೆಸದ ಸಾರ್
ಚೆಟ್ಟಿಹಿಟ್ಟ್
ಅಕ್ಕಿನ ಅಡಿಕೆ ಹಿಟ್ಟ್
ಅಕ್ಕಿ ಕಜಾಯ
ಕಾರರೊಟ್ಟಿ
ಕೊಸ್‌ಲಕ್ಕಿ ಹೊಡಿನ ಬೆಲ್ಲದ ತಂಬಿಟ್ಟ್.
ಮೈದ ಪೊಕ್ಕಡ
ಸೂಸ್‌ಲ್‌ಕಡ್‌ಂಬು
ರವೆ ವಡೆ
ಹೆಸ್‌ರ್‌ಬೇಳೆ ಹೋಳಿಗೆ
ಕಾರ ಅವ್‌ಲಕ್ಕಿ
ಬಾಳೆದಂಡ್ ಪಲ್ಯ
ಬಾಳೆದಂಡ್ ವಡೆ
ಬಾಳೆಕಾಯಿ ಪಲ್ಯ
ಹಗಲಕಾಯಿ ಪಲ್ಯ
ಬಾಳೆಕಾಯಿ ವಡೆ

ರಾಗಿ
ರಾಗಿ ಮುದ್ದೆ
ರಾಗಿ ಅಂಬುಲಿ
ರಾಗಿ ರೊಟ್ಟಿ
ರಾಗಿ ಗಂಜಿ
ರಾಗಿ ದೋಸೆ.

ಗೈಪುಗ
ಬಸಳೆ ಸೊಪ್ಪುನ ಗೈಪು
ತೋಡುಕೆಸದ ಗೈಪು
ಮಡಗಲ ಕಾಯಿ ಗೈಪು
ಅಳ್‌ಂಬು ಗೈಪು
ಕುಜ್ಜೆ ಗೈಪು
ಕಣಲೆ ಗೈಪು
ಬಾಳೆ ದಂಡ್ ಗೈಪು
ಬಾಳೆ ಕಾಯಿ ಗೈಪು
ಪೊಪ್ಪಾಯಿ ಗೈಪು
ಹೀರೆ ಕಾಯಿ ಮೀನ್ ಗೈಪು
ನೀರಾಂಬರ

ಸೊಪ್ಪುಪಲ್ಯಗ
ಹರಿವೆಸೊಪ್ಪು
ನುಗ್ಗೆ ಸೊಪ್ಪು
ಕೆಂಬಡೆ ಸೊಪ್ಪು
ಗಿಣಿಕೆ ಸೊಪ್ಪು
ಚೆಗ್ತೆ ಸೊಪ್ಪು
ತಿಮಾರೆ ಸೊಪ್ಪು
ಚೆರ್ಮೆ ಸೊಪ್ಪು

ಹೂವ್‌ನ ಪಲ್ಯ
ಬಾಳೆ ಕೂಂಬೆ ಪಲ್ಯ
ಪೊಂಗರೆ ಹೂ ಪಲ್ಯ
ದಾಸವಾಳ ಹೂ ಪಲ್ಯ

ಪೊಜ್ಜಿಗ
ಕಾಯಿ ಪೊಜ್ಜಿ
ಸುಂಟಿ ಪೊಜ್ಜಿ
ನೆಲಮಾಂವ್‌ನ ಪೊಜ್ಜಿ
ಚೋಳಿ ಹಣ್ಣ್‌ನ ಪೊಜ್ಜಿ
ಕಂಯ್ಯುಳಿ ಪೊಜ್ಜಿ
ಹಲ್ಸ್‌ನಕ್ಕಿ ಪೊಜ್ಜಿ
ಕುಡು ಪೊಜ್ಜಿ
ಕಡ್ಲೆ ಪೊಜ್ಜಿ
ಎಳ್ಳ್ ಪೊಜ್ಜಿ
ಜೋಳದ ಪೊಜ್ಜಿ
ಕೆಂಬಡೆಕಾಯಿ ತಿರ್‌ಳ್‌ನ ಪೊಜ್ಜಿ
ಸೌತೆಕಾಯಿ ಪೊಜ್ಜಿ
ಹುಣ್‌ಸುಳಿ ಪೊಜ್ಜಿ
ತಿಮರೆ ಸೊಪ್ಪು ಪೊಜ್ಜಿ

ಹೊರ್ದ ಹಿಟ್ಟ್‌ಗ
ರವೆ ಚಕ್ಕುಲಿ
ಬೆಣ್ಣೆ ಚಕ್ಕುಲಿ, ಮುರ್ಕು
ರವೆ ಉಂಡೆ
ಸುಕ್ರುಂಡೆ
ಕರ್ಜಿಕಾಯಿ
ಉದ್ದ್‌ನ ವಡೆ
ಇಲಾತ್‌ಗೆಂಡೆ ಬೋಂಡ

ಪಾಯಿಸಗ
ರೊಟ್ಟಿ ಪಾಯಿಸ
ಕೆಂಬಡೆ ಪಾಯಿಸ
ಸೊರೆಕಾಯಿ ಪಾಯಿಸ
ಬೂದಿಕುಂಬಳ ಪಾಯಿಸ
ಗೋದಿ ಪಾಯಿಸ
ಕೊಸ್‌ಲಕ್ಕಿ
ಹೊರ್ದ ಪಾಯಿಸ

ಆಟಿ ವಿಸೇಸ
ಆಟಿ ಪಾಯಿಸ
(ಮದ್ದ್‌ಕುಳು ಪಾಯಿಸ)
ಆಟಿ ಹಲ್ವ
ಪತ್ರೊಡೆ
ಮರಕೆಸ ಸೊಪ್ಪುನ ಪಲಾವ್
ಕಣಲೆ ಗೈಪು
ಕಣಲೆ ಪಲ್ಯ
ಕಕ್ಕಡೆ ಎಸಂಡ್ ಗೈಪು
ನಾಡ್ ಕೋಳಿ ಗೈಪು
ಅಳ್‌ಂಬು ಗೈಪು
ಸೆಡೆ ಹಿಟ್ಟ್

ಉಪ್ಪ್‌ನ ಕಾಯಿಗ:
ನಿಂಬುಳಿ ಉಪ್ಪ್‌ನಕಾಯಿ
ಹೊಟ್ಟುಳಿ ಉಪ್ಪ್‌ನಕಾಯಿ
ಕೈಂಯುಳಿ ಉಪ್ಪ್‌ನಕಾಯಿ
ಕೈಂಯುಳಿ ಅಡಂಗಾಯಿ
ಮಾಯಿನಕಾಯಿ ಉಪ್ಪ್‌ನಕಾಯಿ
ಮಾಯಿನ ಮಿಡಿ ಅಡಂಗಾಯಿ
ಅಳಂಬು ಮೊಗ್ಗುನ ಉಪ್ಪ್‌ನಕಾಯಿ
ಕೊಯಿಲೆ ಮೀನ್ ಉಪ್ಪ್‌ನಕಾಯಿ
ಕಾಡ್ ಮಾಸದ ಉಪ್ಪಣ
ಇಟ್ಟಿ ಮೀನ್ ಉಪ್ಪ್‌ನಕಾಯಿ
ಬೆಳ್ಳುಳ್ಳಿ ಉಪ್ಪ್‌ನಕಾಯಿ.
ಕಣ್‌ಲೆ ಉಪ್ಪ್‌ನಕಾಯಿ.
ಟೋಮೆಟ ಉಪ್ಪ್‌ನಕಾಯಿ




ಕೊಡಗ್ ಮತ್ತೆ ದಕ್ಷಿಣ ಕನ್ನಡ ಜಿಲ್ಲೆಲಿ ನೆಲೆ ನಿತ್ತಿರುವ ಹತ್ತ್ ಕುಟುಂಬ ಹದಿನೆಂಟ್ ಗೋತ್ರ ಜನಾಂಗ ಅರೆಬಾಸಿಗರ್ ಹುಟ್ಟು ಕೃಷಿಕರಾಗಿದ್ದ್ ಇವು ಧಾರ್ಮಿಕ ಆಚರಣೆಲಿ ಸಬ್ಬಮ್ಮ ದೇವಿನ ಆರಾಧಕರ್. ಇವರ ಪ್ರತಿಯೊಂದು ಕಷ್ಟ-ಸುಕಗಳಿಗೂ ಕಾರ್ಣಕೆ ಇಸುದು ಆ ಕುಟುಂಬದ ಮೂಲ ವ್ಯಕ್ತಿ ಅಳ್ದ್ ಹೋದ ಹಿರಿಯವುತ ಅರ್ಥ. ಕಾರ್ಣಕ್ಕೆ ಇಸುದು ಅರೆಬಾಸಿಕರ ಪ್ರತಿಯೊಂದು ಕಾರ್ಯಕ್ಕೂ ಸುರೂನ ಕಾರ್‌ಬಾರ್‌ತ ಹೇಳಕ್. ಇನ್ನ್ ಕೃಷಿ ಕಾರ್ಯಕ್ಕೆ ಇಳಿಯಕೆ ಮುಂದೆ ದೆವ್ವಕ್ಕೆ ಕೊಡ್ದು ಕ್ರಮ. ಕಾರ್ತಿಂಗ (ಜುಲೈ 15 ರ್‌ಂದ ಆಗಸ್ಟ್ 5) ಹಿಡ್ದಂಗೆ ಈ ಕಾರ್ಯ ಸುರಾಕಿದ್ದ್ ಅವರವರ ಕುಟುಂಬ ಪದ್ಧತಿನಂಗೆ ಮನೆ ಒಳಗೆ-ಹೊರಗೆನ ದೆವ್ವಂಗೆ (ಪಾಷಾಣ ಮೂರ್ತಿ (ಭೂತಂಗ) ಭೂಮಿ ಗುಳಿಗ, ಭೂಮಿ, ಚೌಡಿ ಮೂರ್ತಿಗ, ಮಲೆ ತಮ್ಮಚ್ಚ) ಹಿಂಗೆ ಬೇರೆ ಬೇರೆ ದೇವುರಿಗೆ ಭಕ್ತಿಂದ ಕೊಟ್ಟ್‌ಕಂಡವೆ.

## ಕಾರ್ಣಕ್ಕೆ ಇಸುದು :

ಕಾರ್ಣಕೆ ಇಸ್‌ಕನ ಮುಖ್ಯ ಆಗಿ ಯಾರ ಕಡೆಂದ ಯಾವ ಉದ್ದೇಶಕ್ಕೆತೇಳುವ ವಿಷ್ಯನ ಮನೆ ಹಿರಿಯವು ದೇವುರಲ್ಲಿ ಹೇಳಿಕಂಡ್ ಕೋಳಿನ (ನಾಡ್ ಕೋಳಿ) ಕುತ್ತಿಗೆ ತಿರ್ಟಿ ಕೊಂದವೆ. ಹಂಗೇ ಆ ಕೋಳಿನ ಪೂಜಾರಿನೇ ಗೈಪು ಮಾಡಿ ಹಿಂಬೊತ್ತ್‌ಲಿ ಎಲ್ಲವರ್ನ ಒಟ್ಟು ಸೇರ್ಸಿ ಉಂಬೊಳಗೆ (ಅಡಿಗೆ ಕ್ವಾಂಬರೆಲಿ) ನೀರ್ ದೋಸೆ ಮತ್ತೆ ಅಕ್ಕಿರೊಟ್ಟಿನ ಸೇರ್ಸಿ ಕೋಳಿ ಗೈಪುನ ಕಾರ್ಣವರ್‌ಕೆ ಎಡೆ ಇಕ್ಕುದು ಪದ್ಧತಿ. ಅಲ್ಲದೆ ಕುಟುಂಬಲಿ ದೆವ್ವ ದೇವುರಿಗೆ ಕೊಡ್‌ಕನ ಕೂಡ ಇದೇ ಪದ್ದತಿನ ಅನುಸರಿಸುವೆ. ಆದರೆ ಗುಳಿಗ, ತಮ್ಮಚ್ಚಂಗೆ ಕೊಡ್‌ಕನ ಮಾತ್ರ ಮನೆಲಿ ಯಾವುದೇ ಅಡಿಗೆ ಮಾಡುವ ಕ್ರಮ ಇರ್ದುಲೆ. ಎಲ್ಲಾ ಪೂಜಾರಿನೆ ಮಾಡೊಕು.

## ಕಾರ್ಣಕ್ಕೆ ಇಸುವ ನಾಡ್ ಕೋಳಿ ಗೈಪು

### ಮಾಡುವ ಕ್ರಮ

ನಾಡ್ ಕೋಳಿ ಮಾಸನ ಉಪ್ಪು ಮೆಣ್ಸ್, ಅರಶಿಣ ಹಾಕಿ ಲಾಯ್ಕ್‌ಲಿ ಕಲ್‌ಸಿ ಎಣ್ಣೆಲಿ ಹಾಕಿ ಬೇಸಕು. ಬೆಂದ ಕೋಳಿ ಮಾಸಕೆ ಕಾಯಿನ ತೆಳ್ಳಂಗೆ ಕೊಯ್ದ್ ಹಾಕಕು. ಈ ಕ್ರಮ ದೆವ್ವಕ್ಕೆ ಕೊಡ್‌ಕನ ಮಾತ್ರ ಮಾಡುವೆ.

## ಕಾರ್ಣಕ್ಕೆ ಇಸುವ ಅಕ್ಕಿ ರೊಟ್ಟಿ

ಅಕ್ಕಿರೊಟ್ಟಿ ಕೂಡ ವಿಶೇಷ ರೀತಿಲಿ ತೇಳ್ರೆ ಅಕ್ಕಿ ಹೊಡಿನ ನೀರ್‌ಲಿ ಉಕ್ಕ್‌ರಿಸಿ ರೊಟ್ಟಿ ಮಾಡ್ದು ಪದ್ಧತಿ. ಇದ್ಕೆ ಅನ್ನ ಸೇರ್ಸಿಕೆ ಬೊತ್ತ್.

<u>ಬೇಕಾಗುವ ಸಾಮಾನ್‌ಗ</u> :

ಅಕ್ಕಿಹೊಡಿ

ಉಪ್ಪು

ನೀರ್

### ಮಾಡುವ ಕ್ರಮ

ನೀರ್ ಬಿಸಿ ಮಾಡಿ, ರುಚಿಗೆ ಉಪ್ಪು ಹಾಕಿ ಅದ್ಕೆ ಅಕ್ಕಿಹೊಡಿ ಹಾಕಿ ಉಕ್ಕುರ್‌ಸೊಕು. ಮತ್ತೆ ಸಣ್ಣ ಉಂಡೆ ಮಾಡಿ ರೊಟ್ಟಿತಟ್ಟಿ ಅದನ್ನ ಓಡ್‌ಲಿ ಕಾಸೊಕು.

## ಕಾರ್ಣಕ್ಕೆ ಇಸುವ ನೀರ್‌ದೋಸೆ



### ಮಾಡುವ ಕ್ರಮ

1 ಗಂಟೆ ಮುಂದೇ 1 ಕಪ್ ಅಕ್ಕಿನ ಪದ್‌ನ್‌ಸಿ ಅಕ್ಕಿಗೆ ಸ್ವಲ್ಪ ನೀರ್, ಉಪ್ಪ್ ಹಾಕಿ ಕಲ್ಲ್‌ಲಿ ಅರ್ದ್ ನೊಣ್ಣಂಗೆ ಆದಮೇಲೆ ತೆಗ್ದ್, ಕಾವಲಿಗೆ ಎಣ್ಣೆ ಹಾಕಿ ಹೊಯ್ದ್ ಬಾವಡೆ ಮುಚ್ಚಿ ಬೆಂದಮ್ಯಾಲೆ ತೆಗಿಯೊಕು.




# ಹರಿಸೇವೆ



ಕುಲದೇವ್ರು ವೆಂಕಟರಮಣ ಸ್ವಾಮಿನ ಹರಿಸೇವೆನ ಪ್ರತಿಯೊಂದು ಐನ್ ಮನೆಗಳ್ಲಿ ಭಕ್ತಿಂದ ಆಚರಿಸುವೆ

ಹರಿಸೇವೆಲಿ ಸಾಮಾನ್ಯ ಆಗಿ ಅವ್‌ಲಕ್ಕಿ, ಇಡ್‌ಮಣೆ ಹಿಟ್ಟ್, ಕಾಯಿಹಾಲ್‌ನ, ಪಲಾರತೇಳಿ ಪೂಜೆಗೆ ಮುಂದೆ ತಿಂದವೆ. ಮದ್ಯಾನದ ಊಟಕ್ಕೆ ಅನ್ನ ತರ್‌ಕಾರಿ ಗೈಪು ಮಾಡ್‌ವೆ. ಹಿಂಬೊತ್ತು ಕೆಂಚರಾಯನ ಪೂಜೆಲಿ ಕೋಳಿ, ಆಡ್, ಬೇಟೆ ಕೊಟ್ಟ್ ಅದರ್‍ನ ಪ್ರಸಾದ ತೇಳಿ ಇಕ್ಕುವೆ. ಇದಲ್ಲದೆ ಹರಿಸೇವೆನ ವಿಶೇಷ ಪ್ರಸಾದ ತೇಳ್ರೆ ಮಣ್ಣ್‌ನ ಮಡಿಕೆಲಿ ಮಾಡುವ ಪಾನಕ, ಅವುಲಕ್ಕಿ ಪ್ರಸಾದ ಹಂಚುವ ಕ್ರಮ ತುಂಬಾ ಮುಖ್ಯ.

## ಪಾನಕ

ಬೇಕಾಗುವ ಸಾಮಾನ್‌ಗ

- ಮಣ್ಣ್‌ನ ಮಡಿಕೆ
- ನೀರ್
- ಕಲ್ಲ್‌ಸಕ್ಕರೆ
- ಯಾಲಕ್ಕಿ
- ಒಳ್ಳೆಮೆಣ್ಸ್
- ಸುಂಟಿ

### ಮಾಡುವ ಕ್ರಮ

ಕಾದ್ ಆರ್‌ದ ನೀರ್‌ಗೆ ಕಲ್ಲ್‌ಸಕ್ಕರೆ, ಯಾಲಕ್ಕಿ, ಒಳ್ಳೆಮೆಣ್ಸ್, ಸುಂಟಿ ಎಲ್ಲದರ್‍ನ ಒಟ್ಟಿಗೆ ಸೇರ್ಸಿ ಗುದ್ದಿ ಸಣ್ಣಹೊಡಿ ಮಾಡಿ ಮಡಿಕೆಲಿರ್‌ವ ನೀರ್‌ಗೆ ಹಾಕಿ ತಿರ್‌ಗ್‌ಸಿರೆ ಪಾನಕ ತಯಾರ್. (ಈ ಪಾನಕನ ಬಕ್ತರ್ ಮಾಡುವೆ.)

## ಕಾಯಿಹಾಲ್

ಬೇಕಾಗುವ ಸಾಮಾನ್‌ಗ

- ತೆಂಗಿನಕಾಯಿ
- ಬೆಲ್ಲ
- ನೀರ್
- ಯಾಲಕ್ಕಿ
- ರುಚಿಗೆ ಉಪ್ಪು.

### ಮಾಡುವ ಕ್ರಮ

ತೆಂಗಿನಕಾಯಿನ ಕಡ್ದ್, ಅದರ ಹಾಲ್‌ನ ಹಿಂಡಿಕಂಡ್, ಬೆಲ್ಲದ ಪಾಕ ಮಾಡಿಕಣಕು. ಈ ಪಾಕಕ್ಕೆ ಕಾಯಿಹಾಲ್ ಹಿಂಡಿ ಹೊಡಿ ಮಾಡ್ದ ಯಾಲಕ್ಕಿ, ರುಚಿಗೆ ಉಪ್ಪು ಸೇರ್ಸಿ ಕೊದ್ಸಕು. ಈಗ ಕಾಯಿಹಾಲ್ ತಯಾರಾದೆ.

## ಇಡಮಣೆ ಹಿಟ್ಟ್

### ಮಾಡುವ ಕ್ರಮ

ಬೇಕಾಗುವ ಸಾಮಾನ್‌ಗ

- ಅಕ್ಕಿತರಿ
- ನೀರ್
- ರುಚಿಗೆ ಉಪ್ಪು.

ಒಂದು ಅಳತೆಗೆ ಒಂದರ್ದ ಅಳತೆ ನೀರ್ ಹಾಕಿ, ರುಚಿಗೆ ಉಪ್ಪು ಹಾಕಿ ಕಡಂಬಿಟ್ಟ್‌ಗೆ ಬೇಕಾದಂಗೆ ಉಕ್ಕ್‌ರ್‌ಸಿ ಕಳಸಿಗೆಲಿ ಕಡಂಬಿಟ್ಟ್ ಮಾಡಿ ಬೇಸಕು. ಈಗ ಇಡಮಣೆ ಹಿಟ್ಟ್ ವರ್ಲ್‌ಲಿ ಒಂದೊಂದೆ ಕಡಂಬಿಟ್ಟ್‌ನ ಹಾಕಿ ಒತ್ತಿರೆ ಇಡಮಣೆಹಿಟ್ಟ್ ತಯಾರ್.




## ಅಕ್ಕಿಪಾಯಿಸ

**ಬೇಕಾಗುವ ಸಾಮಾನ್‌ಗ**

ಅನ್ನ
ಬೆಲ್ಲ
ತೆಂಗಿನಕಾಯಿ
ಉಪ್ಪು
ಮೆಂತೆ

**ಮಾಡುವ ಕ್ರಮ**

1 ಕಪ್ ಅಕ್ಕಿನ ಲಾಂಯ್ಕಾಗಿ ಬೇಯಿಸಿಕಂಡ್ 1 ಟೀ ಚಮಚ ಮೆಂತೆನ ಹಾಕಿ, ನಂತರ ಬೆಂದಮೇಲೆ ಬೆಲ್ಲ, ತೆಂಗಿನಕಾಯಿ ತುರಿ, ಉಪ್ಪು ರುಚಿಗೆ ಹಾಕಿ 1 ಕೊದಿ ಬಂದ ಮ್ಯಾಲೆ ಇಳ್‌ಸೊಕು.

## ದೆವ್ವ- ದೇವ್ರಿಗೆ ಕೊಡ್ದು

ಮನೆ ಒಳಗೆ- ಹೊರಗಿನ ದೆವ್ವ ದೇವ್ರುಗ- ಮಲೆ ತಮ್ಮಚ್ಚ- ಗುಳಿಗಂಗೆ ಕೊಡ್ದು. ಇಲ್ಲಿ ವಿಶೇಸ ತೇಕ್ರೆ ಬತ್ತದ ಹೊದ್‌ರಿ.

## ಬತ್ತದ ಹೊದ್‌ರಿ

**ಬೇಕಾಗುವ ಸಾಮಾನ್‌ಗ**

ಬತ್ತ
ಮಣ್ಣ್‌ನ ಮಡ್‌ಕೆ.

**ಮಾಡುವ ಕ್ರಮ**

ಬತ್ತನ ಸ್ವಲ್ಪ ಹೊತ್ತು ನೀರ್‌ಲಿ ಪದ್‌ನಿಸಿ, ಮಣ್ಣ್‌ನ ಮಡ್‌ಕೆಲಿ ಹಾಕಿ ಒಲೆಮ್ಯಾಲೆ ಮಡ್ಗಿ ಕೈಯಾಡ್‌ಸ್ತಾ ಇರೊಕು. ಆಗ ಬತ್ತ ಹೊಟ್ಟಿ ಹೊದ್‌ರಿ ಆದೆ.




## ಕಿಡಾಸ :

ಕೊಡಗು ಮತ್ತೆ ದಕ್ಷಿಣ ಕನ್ನಡ ಜಿಲ್ಲೆನ ಅರೆಬಾಸಿಕ ಜನಾಂಗದವು ವರ್ಷಲಿ ಆಚರಿಸಿಕಂಡ್ ಬರ್‍ತಿರುವ ಸಾಂಪ್ರಾದಾಯಿಕ ಹಬ್ಬಗಳ್ಲಿ ಸುರೂಗೆ ಭತ್ತದ ಒಕ್ಕಲು ಕೆಲ್ಸ ಆದಂಗೆ ಫೆಬ್ರವರಿ ತಿಂಗಳ್ಲಿ (ಪೊನ್ನಿ ತಿಂಗಳ್ಲಿ) ಆಚರಿಸುವ ಕಿಡ್ದಾಸ ಹಬ್ಬ ಆ ದಿನ ಭೂಮಿ ತಾಯಿ ಮುಟ್ಟಾದುತೇಳುವ ನಂಬಿಕೆ ಉಟ್ಟು. ಇಡೀ ಆಚರಣೆಲಿ ಭೂಮಿ ತಾಯಿನ ಹೆಣ್ಣಾಗಿ ಕಂಡ್ ಫಲವಂತಿಕೆಗೆ ಬಳ್ಸಿಕಣುದರ್‍ನ ಕಾಣಕ್. 3 ದಿನಗಳ ಆಚರಣೆಲಿ ಸುರೂನ ದಿನ ಧಾನ್ಯ ಲಕ್ಷ್ಮಿನ ಪೂಜೆ ಮಾಡಿ. ಕಡಿಕೆಲಿ ಕಟ್ಟಿದ ಭತ್ತಕೆ 3 ಕಲ್ಲ್ ಹಂಗೇ ಮುಳ್ಳು (ಚೂರಿ ಮುಳ್ಳುನ) ಕತ್ರಿನಂಗೆ ಮಡ್ಗುವೆ. ಇದ್‌ಕೆ ಕಲ್ಲ್ ಮುಳ್ಳು ಹೇರುದುತ ಹೇಳುವೆ. ಇದ್ ಭತ್ತದ ಭದ್ರತೆಗೆ ದೃಷ್ಟಿಂದ. 2ನೇ ದಿನ ಮನರಂಜನೆಗಾಗಿ ಪ್ರಾಣಿಗಳ ಹಂಗೇ ಮೀನ್‌ಬೇಟೆ ಮಾಡಿ ಊಟ ಮಾಡುವೆ. 3ನೇ ದಿನ ಭೂಮಿ ತಾಯಿಗೆ ನೆಲ ಬೊಳಿ ಬುಡ್‌ಕನ ಎಣ್ಣೆ ಬುಡುವ ಪದ್ಧತಿ. ಇಲ್ಲಿ ಮನೆ ಮುಂದೆ ಅಂಗಳಲಿ ಚೆಂಡೆ ಮುಳ್ಳುನ ಕೊಳ್ಳಿ ಸೀಗೆ, ಅರಶಿಣ ಕೊಂಬುನ ಚಿಪ್ಪಿಲಿ ಮಡ್‌ಗಿ ಒಂದು ಮಣೆ ಮಡ್ಗಿ ಭೂಮಿ ತಾಯಿಗೆ 3 ಸರ್ತಿ ತೆಂಗಿನೆಣ್ಣೆನ ಹಾಕುವೆ.



## ಕೊಯ್ಲೆ ಮೀನ್ / ಹೊಳೆ ಮೀನ್ ಸಾರ್

### ಬೇಕಾಗುವ ಸಾಮಾನ್‌ಗ

ದೊಡ್ಡವರೆ(ಹಸಿ)
ಇಲಾತ್‌ಗೆಂಡೆ
ಕೊಯ್ಲೆ ಮೀನ್
ಉಪ್ಪು
ಮೆಣ್ಸ್
ಅರ್‌ಶಣ
ನೀರುಳ್ಳಿ
ಬೆಳ್ಳುಳ್ಳಿ
ಎಣ್ಣೆ
ಸಾಸುವೆ
ಅಗ್ರಣೆಸೊಪ್ಪು
ಬೇಕಿದ್ದರೆ ಕಾಯ್ಸಿ



### ಮಾಡುವ ಕ್ರಮ

ದೊಡ್ಡವರೆ(ಹಸಿ) ಇಲಾತ್‌ಗೆಂಡೆ, ಸುರುಗೆ ಕೊಯ್ಲೆ ಮೀನ್‌ನ ಸೋಸಿ ಉಪ್ಪು ಮೆಣ್ಸ್ ಅರ್‌ಶಿಣ ಹಾಕಿ ಮಿಸ್ರಮಾಡಿ ಮಡ್ಕಣಕು.

ಈಗ ಬಾಂಡ್ಲಿಲಿ ಎಣ್ಣೆ ಮಡ್ಗಿ ಸಾಸುವೆ ಹೊಟ್ಟ್‌ಕನ ಅಗ್ರಣೆ ಸೊಪ್ಪು, ಬೆಳ್ಳುಳ್ಳಿ, ನೀರುಳ್ಳಿ ಹಾಕಿ ಬಾಡ್ಸಿ ಹಸಿ ಅವರೆ ಕಾಳ್ ಹಾಕಿ ಎಣ್ಣೆಲಿ ಸ್ವಲ್ಪ ಬಾಡ್ಸಿ. ಅದ್‌ಕೆ ಹೋಳು ಮಾಡ್ದ ಗೆಂಡೆನ ಹಾಕಿ ಉಪ್ಪು ಕಾರ ಹಾಕಿ ಮಿಶ್ರಮಾಡಿ ಅದೂ ಸ್ವಲ್ಪ ಬೆಂದಮೇಲೆ ಕೊಯ್ಲೆಮೀನ್ ಸೇರ್‍ಸಿ ಮಿಶ್ರಮಾಡಿ. ಈಗ ರುಚಿನೋಡಿ ಹುಳಿನೂ ಸೇರ್‍ಸಿ. ಬೇಕಿದ್ದರೆ ಕಾಯಿಹಾಕಕ್ ಇಲ್ಲರೆ ಮೀನ್ ಮಸಾಲೆ ಸೇರ್‍ಸಿ ಕೊದ್ದ ಮೇಲೆ ಇಳ್ಸಿ. ಈ ಮೀನ್ ಸಾರ್ ರೊಟ್ಟಿಗೆ ಬಾರೀ ರುಚಿ.




ಕೃಷಿಕರಾಗಿರುವ ಕೊಡಗ್‌ನ ಅರೆಭಾಷಿಕರ್ ಬೆಳೆ ಕೆಲ್ಸ ಆದಂಗೆ ಜನವರಿ ತಿಂಗಳ 14 ರಂದ್ ಬರುವ ಮಕರ ಸಂಕ್ರಾಂತಿ ಹಬ್ಬನ ಕೂಡ ಆಚರಿಸುವೆ. ಇಲ್ಲಿ ಒಕ್ಕುಲು ಕೆಲ್ಸ ಆಗಿ ಕಡಿಕೆಲಿ ಭತ್ತ ಕಟ್ಟಿದ್ದ್ ಹೊಸ ಭತ್ತನ ಅಕ್ಕಿ ಮಾಡಿ ಊರು ದೇವುರಿಗೆ ನೈವೇದ್ಯ ಮಾಡುವೆ. ಇದಾದ ಮೇಲೆ ಮನೆ ಮನೆಗಲ್ಲಿ ಹೊಸ ಅಕ್ಕಿನ ಪಾಯಿಸ ಮಾಡಿ ಊಟ ಮಾಡುವೆ. ಹೊಸ ಅಕ್ಕಿ ಪಾಯಿಸ ಆದಂಗೆ ಹೊಸ ಅಕ್ಕಿಲಿ ಸುರೂಗೆ ಕಡಂಬಿಟ್ಟ್, ಹುಳಿ ದೋಸೆ ಮಾಡ್ದು ಪದ್ಧತಿ. ಹೊಸ ಅಕ್ಕಿ ಪಾಯಿಸ ಊಟ ಮಾಡುದಕ್ಕೆ ಅರೆಬಾಸೆಲಿ ಹೊಸ್ತ್ ಊಟತ ಹೇಳುವೆ.

## ಹೊಸಕ್ಕಿ ಪಾಯಿಸ

### ಬೇಕಾಗುವ ಸಾಮಾನ್‌ಗ

ಹೊಸ ಅಕ್ಕಿ
ಬೆಲ್ಲ
ತೆಂಗಿನಕಾಯಿ
ಉಪ್ಪು.

### ಮಾಡುವ ಕ್ರಮ

1 ಕಪ್ ಅಕ್ಕಿನ ಲಾಯ್ಕಾಗಿ ಬೇಸಿಕಂಡ್ ನಂತರ ಬೆಂದಮೇಲೆ ಬೆಲ್ಲ, ತೆಂಗಿನಕಾಯಿ ಹೂ, ಉಪ್ಪು ರುಚಿಗೆ ಹಾಕಿ 1 ಕೊದಿ ಬಂದ ಮ್ಯಾಲೆ ಇಳ್‌ಸೊಕು.

## ಹೊಸಕ್ಕಿ ಕಡಂಬಿಟ್ಟ್

### ಬೇಕಾಗುವ ಸಾಮಾನ್‌ಗ

ಹೊಸ ಅಕ್ಕಿತರಿ
ಉಪ್ಪ್
ನೀರ್

### ಮಾಡುವ ಕ್ರಮ

ಒಂದು ಅಳತೆ ತರಿಗೆ ಒಂದರ್ದ ಅಳತೆ ನೀರ್ ಹಾಕಿ ರುಚಿಗೆ ಉಪ್ಪ್ ಸೇರ್ಸಿ ಉಕ್ಕ್‌ರ್‌ಸಿಕಣೊಕು. ಬೆಂದ ಬಂದನ ಸಣ್ಣ ಸಣ್ಣ ಉಂಡೆ ಮಾಡಿ ಕಳ್ಸ್‌ಗೆಲಿ ಬೇಸಿರೆ ಕಡಂಬಿಟ್ಟ್ ತಯಾರ್.

## ಹೆಸ್‌ರ್ ಬೇಳೆ, ಕಡ್ಲೆಬೇಳೆ ಪಾಯಿಸ

### ಬೇಕಾಗುವ ಸಾಮಾನ್‌ಗ

ಕಡ್ಲೆಬೇಳೆ
ಹೆಸ್‌ರ್ ಬೇಳೆ
ಬಿಳಿ ಬೆಲ್ಲ
ಕಾಯಿ ಹೂ
ಯಾಲಕ್ಕಿ
ದ್ರಾಕ್ಷಿ
ಗೇರ್‌ಬೀಜ
ರುಚಿಗೆ ಉಪ್ಪು

### ಮಾಡುವ ಕ್ರಮ

ಕಡ್ಲೆಬೇಳೆನ ಸುರೂಗೆ ಬೇಸಿಕಣಕು. ಅರ್ಧ ಬೇಯಕನ ಹೆಸರ್ ಬೇಳೆ ಸೇರ್ಸಿ ಬೆಂದಮೇಲೆ ಬೆಲ್ಲ, ಕಾಯಿಹೂ, ರುಚಿಗೆ ಉಪ್ಪು , ಸೇರ್ಸಿ ಕೊದ್‌ಸಿ, ಕಡೇಗೆ ತುಪ್ಪಲಿ ಹೊರ್ದ ಗೇರ್ ಬೀಜ, ದ್ರಾಕ್ಷಿ ಸೇರ್ಸಿ ಇಳ್‌ಸಿ. ಈಗ ಯುಗಾದಿ ಪಾಯಿಸ ತಯಾರ್.








# ಉಗಾದಿ



ಯುಗಾದಿ ಹಬ್ಬ ಹಿಂದೂಗಳ್ಲಿ ವರ್ಷದ ಸುರೂನ ಹಬ್ಬ. ಹಿಂಗಾಗಿ ಹೊಸ ವರ್ಷಲಿ ಕಷ್ಟ-ಸುಖ, ಸಿಹಿ-ಕಹಿ ಸಮಾನಾಗಿ ಬರ್ಲಿತೇಳುವ ಆಶಾಭಾವನೆಂದ ಬೇವು-ಬೆಲ್ಲನ ತಿಂದವೆ. ಅಂದ್‌ನ ವಿಶೇಷ ಕುಟುಂಬದ ಯಜಮಾನ ಹೊಸವರ್ಷದ ಫಲ, ಆಯವ್ಯಯ, ಜಯಾಪಜಯ, ಹಂಗೇ ಭವಿಷ್ಯನ ಹೊಸ ಪಂಚಾಂಗ ನೋಡಿ ತಿಳ್ಸುವೆ. ಹೊಸ ವರ್ಷ ಸುರು ಆದ್ವರ್‌ಂದ ಆ ಹೊತ್ತುಗೆ ಹದ ಆಗಿ ಮಳೆಯಾಗಿದ್ದರೆ ಎತ್ತ್‌ಕಟ್ಟುವ ಕಾರ್ಯ ನಡ್ದದೆ. ಭೂಮಿ ಹದ ಆಗದಿದ್ದಲ್ಲಿ ಬಿಸು ದಿನದಂದ್ ಎತ್ತ್ ಕಟ್ಟುವ ಕಾರ್ಯ ನಡ್ದದೆ. ಯುಗಾದಿ ದಿನದಂದ್ ಮನೆ ಮನೆಗಳ್ಲಿ ವಿಶೇಷ ಅಡಿಗೆ ತಯಾರ್ಸಿ ಮನೆಜನ ಒಟ್ಟಿಗೆ ಕುದ್ದ್ ಬಾಳೆಲೆಲಿ ಊಟ ಮಾಡುವ ಕ್ರಮ ಉಟ್ಟು. ಯಾವುದೇ ಶುಭ ಕಾರ್ಯಕ್ಕೆ ಕೈ ಹಾಕುದಾದರೆ ಅಂದ್ ಒಳ್ಳದೇ ಆದೆ. ಯುಗಾದಿ ದಿನ ಊರು ದೇವಸ್ಥಾನಲಿ ವಿಶೇಷ ಪೂಜೆ ಮನರಂಜನಾ ಕಾರ್ಯಕ್ರಮಗ ಕ್ರೀಡಾಕೂಟಗ:- ವಿಶೇಷ ಆಗಿ ಕೊಡ್‌ಗ್‌ಲಿ ಕಾಯಿಗೆ ಗುಂಡು ಹೊಡಿವ ಕಾರ್ಯಕ್ರಮಗ ಇದ್ದವೆ. ಬಿಸು ದಿನ ನೆಕ್ಕಿ ಗಿಡದ ಕೋಲು ಹಿಡ್ದ್ ಒಂದು ಒಳಿ(3ಸಾಲ್) ಗದ್ದೆ ಹೊಡಿ ಭತ್ತದ ಕೃಷಿ ಕೆಲ್ಸಕ್ಕೆ ಕೈ ಹಾಕುವೆ.

ಇನ್ನ್ ಯುಗಾದಿ ಅಂಗ ಆಗಿ ಮಾಡುವ ವಿಶೇಷ ತಿಂಡಿ ತಿನಸ್ ಬೇವು-ಬೆಲ್ಲ, ಪಾಯಿಸ, ಹೋಳಿಗೆ, ವಡೆ.





## ಬೇವುಬೆಲ್ಲ

**ಬೇಕಾಗುವ ಸಾಮಾನ್‌ಗ**

ಬೇವ್‌ನ ಸೊಪ್ಪು
ಬೆಲ್ಲ
ತೆಂಗ್‌ನಕಾಯಿ.

**ಮಾಡುವ ಕ್ರಮ**

ಬೇವ್‌ನಸೊಪ್ಪುನ ಸೋಸಿಕಂಡ್ ಬೆಲ್ಲ, ಕಾಯಿ ಸೇರ್ಸಿ ಗುದ್ದಿ ಹೊಡಿಮಾಡಿಕಂಡ್ರೆ ಬೇವುಬೆಲ್ಲ ತಯಾರ್.



## ಕಡ್ಲೆಬೇಳೆ ವಡೆ

**ಬೇಕಾಗುವ ಸಾಮಾನ್‌ಗ**

ಕಡ್ಲೆಬೇಳೆ
ನೀರುಳ್ಳಿ
ಕಾಯಿಮೆಣ್ಸ್
ಶುಂಠಿ
ಸಂಬಾರ ಸೊಪ್ಪು
ಅಗ್ರಣೆ ಸೊಪ್ಪು
ರುಚಿಗೆ ಉಪ್ಪು
ಹೊರಿಯಕೆ ಎಣ್ಣೆ

ಕಡ್ಲೆಬೇಳೆನ ಸುರೂಗೆ ಬೇಸಿಕಣಕು. ಅರ್ಧ ಬೇಯಕನ ಹೆಸರ್ ಬೇಳೆ ಸೇರ್ಸಿ ಬೆಂದಮೇಲೆ ಬೆಲ್ಲ, ಕಾಯಿಹೂ, ರುಚಿಗೆ ಉಪ್ಪು , ಸೇರ್ಸಿ ಕೊದ್‌ಸಿ, ಕಡೇಗೆ ತುಪ್ಪಲಿ ಹೊರ್ದ ಗೇರ್ ಬೀಜ, ದ್ರಾಕ್ಷಿ ಸೇರ್ಸಿ ಇಳ್‌ಸಿ. ಈಗ ಯುಗಾದಿ ಪಾಯಿಸ ತಯಾರ್.





## ಹೋಳಿಗೆ

**ಬೇಕಾಗುವ ಸಾಮಾನ್‌ಗ**

ಕಡ್ಲೆ ಬೇಳೆ–1 ಕೆ.ಜಿ
ಹೆಸರು ಬೇಳೆ–1 ಕೆ.ಜಿ
ತೆಂಗಿನಕಾಯಿ–2
ಬೆಲ್ಲ– 1 ½ ಕೆ.ಜಿ
ಮೈದಾ ಹೊಡಿ–1 ½ ಕೆ.ಜಿ
ಚಿರೋಟಿ ರವೆ
ಸಕ್ಕರೆ
ಚಿಟಿಕೆ ಉಪ್ಪು
ಏಲಕ್ಕಿ ಹುಡಿ
ಚಿಟಿಕೆ ಅರಶಿಣಹೊಡಿ
ಎಣ್ಣೆ ಸ್ವಲ್ಪ



**ಮಾಡುವ ಕ್ರಮ**

(1) ಸುರುಗೆ ನೀರಿಗೆ ಮೈದಾ, ಅರಶಿಣ ಹೊಡಿ, ಚಿರೋಟಿರವೆ, ಎಣ್ಣೆ ಎಲ್ಲ ಸೇರ್‌ಸಿ ಲಾಯ್ಕಲಿ ಕಲ್ಸೊಕು ಅದ್ ರಬ್ಬರ್ ತರ ಎಳ್‌ದ್ ಬರೊಕು, ಅದನ ಕರೆಲಿ ಮಡ್ಗೊಕು.

(2) ಬೇಳೆನ 4 ಗಂಟೆ ಪದ್‌ನ್‌ಸಿ ಅದನ ಬೇಯಿಸೊಕು, ಅದರ ನೀರ್‌ನ ಬಗ್ಗಿಸಿ ಬೆಲ್ಲ ಹಾಕಿ ತಿರ್‌ಗ್‌ಸೊಕು, ಅದಕ್ಕೆ ಚಿಟಿಕೆ ಉಪ್ಪು ಹಾಕಿ ಮಿಕ್ಸಿಲಿ ನೊಣ್ಣಂಗೆ ರುಬ್ಬೊಕು. ಅದರ್‌ನ ಸಣ್ಣ ಉರಿಲಿ ದಪ್ಪ ತಳದ ಪಾತ್ರೆಲಿ ಉಕ್ಕ್‌ರ್‌ಸಿಕಂಡ್ ಇರೊಕು. ಇದಕ್ಕೆ ತೆಂಗಿನ ತುರಿನ ಮಿಕ್ಸಿಲಿ ಹಾಕಿ ಆಡ್ಸಿ ಸೇರ್ಸಕು. ಪಾತ್ರೆ ತಳ ಬುಡೊಕು. ಮತ್ತೆ ಈ ಹೂರಣನ ಆರಿಕೆ ಬುಡೊಕು.

(3) ಕಲ್‌ಸಿದ ಮೈದಾ ಹಿಟ್ಟ್‌ನ ಅಂಗೈಲಿ ಹಾಕಿ ತಟ್ಟಿಕಂಡ್ ಅದರ ಒಳಗೆ ನಿಂಬೆಗಾತ್ರದ ಬೇಳೆ ಹೂರಣನ ಹಾಕಿ, ಸುತ್ತ ಮುಚ್ಚೊಕು. ಮತ್ತೆ ಚಪಾತಿ ಮಣೆಲಿ ಲಟ್ಟ್‌ಸೊಕು. ಅದನ್ನ ತವ ಇಲ್ಲರೆ ಕಾವ್‌ಲಿಲಿ ನಿದಾನಕ್ಕೆ ಕಾಸಿ, ತುಪ್ಪ ಹಾಕಂಡ್ ತಿನ್ನಕ್.

## ಬಿಸು

ಅರೆಬಾಷೆರ್ ಬಿಸು ಹಬ್ಬನ ಕೃಷಿಗೆ ಸಂಬಂಧಪಟ್ಟಂಗೆ ಗದ್ದೆಲಿ ಎತ್ತ್ ಕಟ್ಟುವ ಮೂಲಕ ಆಚರಣೆ ಮಾಡುವೆ. ಅಂದ್ ಹೊತ್ತಾರೆ ಗದ್ದೆಲಿ ಗಣಪತಿಗೆ ಇಡಿ ಎತ್ತ್‌ಕಟ್ಟಿ ನೆಕ್ಕಿ ಕೋಲು ಹಿಡ್ದ್ ಒಂದು ಒಳ ಹೂಡ್ತ್ ಕ್ರಮ. ವಿಶೇಷ ಆಗಿ ಅಂದ್ ಬಾಳೆ ಹಣ್ಣ್ ಕಜಾಯನ ಪ್ರಸಾದ ಶೇಳಿ ಮಾಡುವೆ.



## ಬಾಳೆಹಣ್ಣ್ ಕಜ್ಜಾಯ

**ಬೇಕಾಗುವ ಸಾಮಾನ್‌ಗ**

ಬಾಳೆಹಣ್ಣ್
ಅಕ್ಕಿಹೊಡಿ
ರುಚಿಗೆ ಉಪ್ಪು
ಎಣ್ಣೆ.

**ಮಾಡುವ ಕ್ರಮ**

ಬಾಳೆಹಣ್ಣ್‌ನೊಟ್ಟಿಗೆ ಅಕ್ಕಿಹೊಡಿ, ಉಪ್ಪು ಸೇರ್ಸಿ, ಲಾಯ್ಕಾಗಿ ಕಲ್ಸಿ, ಸಣ್ಣ ಸಣ್ಣ ಉಂಡೆಮಾಡಿ ಕಾದ ಎಣ್ಣೆಲಿ ಹೊರಿಯೊಕು.



# ಕೈಲ್ ಮೂರ್ತ



ಕಾಲ ಚಕ್ರ ಋತುಮಾನಕ್ಕನುಗುಣ ಆಗಿ ನಡಿವ ವರ್ಷದ ಹಬ್ಬ ಆರೆಭಾಷಿಕರ ಜನಪ್ರಿಯ ಹಬ್ಬ, ಹಾಗೇ ಗೌಜಲಿ ಆಚರಣೆ ಮಾಡುವ ಹಬ್ಬ ಕೈಲ್ ಮೂರ್ತ ಹಬ್ಬ, ಕೈಲ್ ಮೂರ್ತ ಕೃಷಿ ಸಂಗಾತಿಗಳ ಒಂದು ಪ್ರಸಿದ್ಧ ಆಯುಧಪೂಜೆ ನಾಡ ಹಬ್ಬ. ಇದ್ ಪಗ್ಗ ತಿಂಗಳ್ಲಿ ಸುರಾಗುವ ಕೃಷಿ ಕೆಲ್ಸಗ ಸೋಣ ತಿಂಗಳ್ಲಿ ನಾಟಿ ಕೆಲ್ಸ ಅಕಿರಿ ಆಕೆಮುಟ್ಟ ಮುಂದುವರ್ದದೆ. ಕೈಲ್ ಮೂರ್ತ ಹಬ್ಬನ ಕೊಡಗ್‌ಲಿ ಒಂದೇ ದಿನ ಆಚರಣೆ ಮಾಡ್ತಲೆ, ಸೋಣ 8-12 ಮತ್ತ್ 18ರ ಕೈಲ್ ಮೂರ್ತ ಹೇಳಿ ಬೇರೆ ಬೇರೆ ತಾರೀಕ್‌ನಂದ್ ಆಚರಿಸುವೆ. ಮಡಿಕೇರಿ ತಾಲೂಕುನ ಗಾಳಿಬೀಡ್, ಭಾಗಮಂಡ್ಲ, ನಾಪೋಕ್ಲು ಕಡೆಯುವ 12 ರ ಹಂಗೆ ಬಾಕಿ ಎಲ್ಲಾ ಕಡೆಗಳ್ಲಿ 18 ರ ಕೈಲ್ ಮೂರ್ತ ಆಚರಣೆ ಮಾಡುವೆ. ಸೋಣ 18 ಸೆಪ್ಟಂಬರ್ 3 ರಂದ್ ಈಗ ಕರ್ನಾಟಕ ರಾಜ್ಯ ಸರ್ಕಾರ ನಿರ್ಬಂಧಿತ ರಜಾ ದಿನತ ಘೋಷಣೆ ಮಾಡಿಟ್ಟು, ಇಲ್ಲಿ ಹಬ್ಬದ ದಿನ ಪೊರಾವ ಕೃಷಿಗೆ ಉಪಯೋಗಿಸುವ ನೇಗ್‌ಲ್, ನೊಗ, ಕೊಟ್ಟು(ಗುದ್ದಲಿ) ಕತ್ತಿ, ಕೋವಿ ನೆಲ ಹೊಳ್ಸಿ ಮಡಿ ಮಾಡಿ ಪೂರ್ವ ಎತ್ತ್‌ಗಳ್ನ ಮೈ ತೊಳ್ಸಿ ಅವರ ಕೊಂಬ್‌ಗೆ ಎಣ್ಣೆ ಅದ್‌ಕಿಣ ತಿಕ್ಕಿ ಗಂಧವೊಟ್ಟು ಹಾಕಿ ಆಯುಧಗಳಗೆ ಈ ತಿಂಗಳ್ಲಿ ಕಾಡ್‌ಲಿ ಸಿಕ್ಕುವ ವಿಶೇಷ ಗೌರಿ ಹೂ ಇದ್‌ಕ್ಕೆ ಕೋವಿ ಹೂ, ನೇಗ್‌ಲ್ ಹೂ ಹೇಳಿ ಹೆಸ್‌ರ್ ಈ ಹೂವುಂದ ಅಲಂಕಾರ ಮಾಡುವೆ. ಮತ್ತೆ ತೊಳಸ್‌ನ ಹಿಟ್ಟ್ ಎಡೆ ಇಕ್ಕಿ ಪೂಜೆ ಮಾಡುವೆ.

ಈ ವಿಶೇಷ ಪೂಜೆನ ಹಬ್ಬ ಬಾಗ್‌ಲ್‌ಲಿ ಮಾಡುವೆ. ಮನೆಲಿ ಹಬ್ಬದಡಿಗೆ ವಿಶೇಷ ಆಗಿ ಹಂದಿಗೈಮು ಬಿಲ್ಲಟ್ಟ್ ಸೇರ್ದಂಗೆ ಹೆಚ್ಚಿನವ್ರು ಪೂರ್ತಿ ಮಾಸದಡಿಗೆ ಇದ್ದದೆ. ಇದರೊಟ್ಟಿಗೆ ಆಟೋಟ ಪೈಪೋಟಿ ನಡ್ದದೆ.

## ತೊಳ್ಸ್‌ನ ಹಿಟ್ಟ್

### ಬೇಕಾಗುವ ಸಾಮಾನ್‌ಗ

ಅಕ್ಕಿ
ಉಪ್ಪು
ಕಾಯಿ
ತುಪ್ಪ
ಬಾಳೆಹಣ್ಣ್

### ಮಾಡುವ ಕ್ರಮ

ಒಂದು ಪಾತ್ರೆಗೆ ನೀರ್ 1:2 ಹಾಕಿ ಉಪ್ಪು, ಕೊದಿಬಂದ ಮೇಲೆ ಅಕ್ಕಿನ ಹೊರ್ದ್ ನೈಸ್ ಮಾಡಿದ ಹೊಡಿನ ಬೆಲ್ಲ ಹಾಕಿ ಲಾಯ್ಕ ಹಞ ಗಟ್ಟಿಯಾದ ಮೇಲೆ ಇಳ್ಸಕು. ಇನ್ನೊಂದು ತಟ್ಟೆ ಮೇಲೆ ಕೊಡಿ ಬಾಳೆಲೆ ಮಾಡ್ಗಿ ಅದಕ್ಕೆ ತೊಳ್ಸ್‌ನಿಟ್ಟ್ ಹಾಕಿ, ಅದರ ಮದ್ಯಕ್ಕೆ ಕಾಯಿ ಹೂ ತುಪ್ಪ, ಹಞ ಸಕ್ಕರೆ ಹಾಕಕು. ಅದರ ಸುತ್ತ ಬಾಳೆಹಣ್ಣ್‌ನ ತೊಪ್ಪೆ ಚೊಲ್ಲಿ ಇಸಕು.



## ಹಂದಿಮಾಸ ಸುಟ್ಟು

### ಬೇಕಾಗುವ ಸಾಮಾನ್‌ಗ

ತುಂಡುಮಾಡ್ದ ಹಂದಿಮಾಸ
ಬರೆಗೋಲು
ಸಣ್ಣಮೆಣ್ಸ್
ಉಪ್ಪು
ನಿಂಬುಳಿ
ಬಾಳೆಲೆ

### ಮಾಡುವ ಕ್ರಮ

ತುಂಡುಮಾಡ್ದ ಹಂದಿಮಾಸನ ಬರೆಗೋಲುಲಿ ಸುರ್ದ್, ಕೆಂಡಲಿ ಲಾಯ್ಕ ಸುಡೋಕು. ಸುಟ್ಟ ಹಂದಿಮಾಸನ ಸಣ್ಣಸಿಗ್ದ್, ಉಪ್ಪು, ಗುದ್ದಿದ ಸಣ್ಣಮೆಣ್ಸ್, ನಿಂಬುಳಿ ಸೇರ್ಸಿ, ಬಾಳೆಲೆಲಿ ಕಲ್ಸಿ ತಿಂದರೆ ಬಾರಿ ರುಚಿ.



## ಬಟ್ಲೆಟ್ಟ್ ಇಡ್ಲಿ

### ಬೇಕಾಗುವ ಸಾಮಾನ್‌ಗ

ಅಕ್ಕಿ
ಉದ್ದ್‌ನಬೇಳೆ
ಅನ್ನ
ಉಪ್ಪು
ಸೋಡಾಹೊಡಿ
ನೀರು

### ಮಾಡುವ ಕ್ರಮ

ಅಕ್ಕಿ ಮತ್ತೆ ಉದ್ದಿನಬೇಳೆ 6 ಗಂಟೆ ನೀರ್‌ಲಿ ಪದ್‌ನ್‌ಸಿ ಸ್ವಲ್ಪ ತರಿಯಾಗಿ ಅನ್ನ ಉಪ್ಪು ಸೇರ್ಸಿ ಕಡಿಯೊಕು. ಇದನ್ನ ಲಾಯ್ಕ್‌ಲಿ ಗಾಳಿಯಾಡದಂಗೆ 8 ಗಂಟೆ ಮುಚ್ಚಿಡೊಕು. ಮತ್ತೆ ಅದ್‌ಕ್ಕೆ ಸ್ವಲ್ಪ ಸೋಡಾಹುಡಿ ಸೇರ್ಸಿ ತಿರ್‌ಗ್‌ಸಿ ಕಳ್‌ಸಿಗೆಲಿ ಬಟ್ಲ್‌ಗೆ ಹೊಯ್ದ್ ಹತ್ತ್ ನಿಮಿಸ ಹಬೆಲಿ ಬೇಸೊಕು. ಇಡ್ಲಿ ಮಾಡಿಕನ ಇದೇ ತರ ಇಡ್ಲಿ ತಟ್ಟೆಲಿ ಬೇಸೊಕು.

## ಹಂದಿಗೈಪು



### ಬೇಕಾಗುವ ಸಾಮಾನ್‌ಗ

ತುಂಡುಮಾಡ್ದ ಹಂದಿಮಾಸ
ಹಸಿಮೆಣ್ಸ್
ಸುಂಟಿ
ನೀರುಳ್ಳಿ
ಬೆಳ್ಳುಳ್ಳಿ
ಜೀರಿಗೆ
ಸಂಬಾರಸೊಪ್ಪು
ಅಗ್ರಣೆಸೊಪ್ಪು
ಉಪ್ಪು
ಕಾಸುಳಿ
ಅರಶಿಣ

### ಮಾಡುವ ಕ್ರಮ

ತುಂಡುಮಾಡ್ದ ಹಂದಿ ಮಾಸನ ಲಾಯ್ಕ ತೊಳ್ದ್ ಉಪ್ಪು, ಗುದ್ದಿದ ಸುಂಟಿ, ಬೆಳ್ಳುಳ್ಳಿ, ನೀರುಳ್ಳಿ, ಜೀರಿಗೆ ಉಪ್ಪು ಅರಶಿಣ ಸೇರ್ಸಿ ಬೇಸೊಕು. ಬೇಯಕನ ಅದಕ್ಕೆ ಹಂದಿಮಾಸ ಮಸಾಲೆ ರುಚಿಗೆ ಕಾಸುಳಿ, ಅಗ್ರಣೆಸೊಪ್ಪು, ಸಂಬಾರ ಸೊಪ್ಪು ಹಾಕಿ ತಿರ್‌ಗುಸೊಕು. ಆಗ ಹಂದಿಗೈಪು ತಯಾರಾದೆ.



ಭಾಗಮಂಡಲ ತಲಕಾವೇರಿ ಕುಂಡಿಕೆಲಿ ಕಾವೇರಿ ಪವಿತ್ರ ತೀರ್ಥ ಉಕ್ಕುದು (ತೀಥೋದ್ಭವ) ಬೆಳ್ತಿಂಗ ತೇಳ್ರೆ ಅಕ್ಟೋಬರ್ ತಿಂಗಳ 16– 17 ನೇ ತಾರೀಕ್‌ನಂದ್ ಸಾಮಾನ್ಯ ಆಗಿ ಅದೆ. ಈ ಪವಿತ್ರ ದಿನಕ್ಕೆ ಸ್ವಾಗತ ತೇಳುವಂಗೆ ಕೊಡಗ್ ಜಿಲ್ಲೆಲಿ ತೀರ್ಥ ಬರುವ ಹಿಂದೆನ ದಿನದಂದ್ ಮನೆಬಾಗ್ಲ್ ಹಟ್ಟಿ, ಗೊಬ್ಬರಗುಂಡಿ, ಬಾವಿ ಕರೆಲಿ ಬೆತ್ತ್(ಬೆಟ್ಟಿ) ನೋಕಟೆ ಬಳ್ಳಿ ಸಿಕ್ಕ್‌ಸಿ ಅಲಂಕಾರ ಮಾಡುವೆ. ಹಂಗೇ ಕುಟುಂಬದ ಒಂದು ಯಾಕ್‌ಲ್ ಇಲ್ಲರೆ ಗಣೋದಿ ಗದ್ದೆಲಿ 3 ಬೆತ್ತ್‌ನೆಟ್ಟ್ ನೋಕಟೆ ಬಳ್ಳಿಂದ ಅಲಂಕಾರ ಮಾಡುವೆ. ಪವಿತ್ರ ತೇರ್ತ ಉಕ್ಕಿದ ಮೇಲೆ ಕೋಳಿ ಕೂಂಗಿಕೆ ಮುಂದೆ ಮನೆಲಿ ದೋಸೆ ಹಿಟ್ಟ್ ಮಾಡಿ ಕಾಯಿ ಹೂ, ಬಾಳೆಹಣ್ಣ್ ಹಸ್‌ನ ತುಪ್ಪಹಾಕಿ 3 ದೋಸೆನ ಒಟ್ಟಿಗೆ ಮಡ್ಗಿ ಗದ್ದೆಲಿ ಅಲಂಕಾರ ಮಾಡ್ದ 3 ಬೆತ್ತ್‌ನ ಮೇಲೆ ಮಡ್ಗಿ 3 ಸರ್ತಿ ಪಾಂಡವುರ್‌ನ ಕಾವೇರಮ್ಮನ ಸಾಕ್ಷಿ ಹೇಳಿ ಕರ್ದವೆ. ಇಲ್ಲಿ ರಾಮಾಯಣ ಮತ್ತೆ ಮಹಾಭಾರತದ ಕಥೆಗ ಕೊಡಗ್‌ನ ಅರೆಭಾಸಿಕರ್ಲಿ ಜನಪ್ರಿಯ ಆಗಿರುದರ್ನ ಸ್ಪಷ್ಟ ಪಡ್ಸಿದೆ. ಹಂಗೇ ನಮ್ಮ ಧಾರ್ಮಿಕ ಆಚರಣೆಲಿ ಸ್ವರ್ಗಸ್ಥರಾದವುಕೆ ಪಿಂಡ ಹಾಕುವ ಕ್ರಮನೂ ಒಂದಾಗಿದ್ದ್ ಮನೆಲಿ ಸಾವು ಆದರೆ ತೀಕೆಗೆ ನಿತ್ತವು 48 ದಿನ ಕಳ್‌ದಮ್ಯಾಲೆ ಭಾಗಮಂಡ್ಲ ತ್ರೀವೇಣಿ ಸಂಗಮಲಿ ಪೂಜೆ ಮಾಡಿ ಪಿಂಡ ಹಾಕಿ ತೀರ್ಥ ಪ್ರಸಾದತಂದ್ ಮನೆವುಕೆ, ನೆರೆಮನೆವುಕೆ ಹಂಚುವೆ. ಅಲ್ಲದೆ ಕಾವೇರಿ ತೀರ್ಥ ಬಂದ ದಿನಂದ 1 ತಿಂಗ ತೇಳ್ರೆ ಕಿರು ಸಂಕ್ರಮಣದವರೆಗೆ ಕುಟುಂಬದ ಯಾರಾದಾರ್ ಒಬ್ಬನಾರ್ ಕುಂಡಿಕೆಲಿ ಮಿೂದ್ ಬಾದು ಪದ್ದತಿ. ಕಾವೇರಿ ಜಾತ್ರೆನ ವಿಶೇಸಾಗಿ ಅಂದ್ ಹೊತಾರೆ ಹುಳಿದೋಸೆ, ಕೆಂಬಡೆಕಾಯಿ ಸಾರ್, ಪಲ್ಯಗೈಮ ಮಾಡುವೆ.



## ಹುಳಿದೋಸೆ

### ಬೇಕಾಗುವ ಸಾಮಾನ್‌ಗ

ಅಕ್ಕಿ ಮೆಂತೆ
ಅನ್ನ ಸೋಡಾ(ಅಡಿಗೆ)
ಉದ್ದು ಉಪ್ಪ್

### ಮಾಡುವ ಕ್ರಮ

ಒಂದು ದಿನಕ್ಕೆ ಮುಂಚೆ ಅಕ್ಕಿ, ಉದ್ದ್, ಮೆಂತೆನ 2–3 ಗಂಟೆ ನೆನೆ ಹಾಕಿ, ಕಲ್ಲ್‌ಲಿ ಹಾಕಿ ಆಡ್ಸಿ ಅದ್ನೆ ಮಾರ್‍ನೆ ದಿನ ಉಪ್ಪು, ಸೋಡಾ ಹಾಕಿ ತಿರ್‌ಗ್‌ಸಿ ಕಾವ್‌ಲಿಗೆ ಎಣ್ಣೆ ಹಾಕಿ ಹೊಯ್ದ್ ತೆಗಿಯೋಕು. ಹಂಗೆ ಇದೇ ಹಿಟ್ಟ್‌ನ (ಬಂದ) ಹಱ ಗಟ್ಟಿಯಗಿ ತೆಗ್‌ದರೆ ಬಟ್ಲಟ್ಟ್ ಮಾಡಕ್.

## ಕೆಂಬಡೆಕಾಯಿ ಸಾರ್

### ಬೇಕಾಗುವ ಸಾಮಾನ್‌ಗ



ಕೆಂಬಡೆಕಾಯಿ ಇಲ್ಲರೆ ಹಣ್ಣ್
ಹಸಿ ಮೆಣ್ಸ್ ಇಲ್ಲರೆ ಒಣ್‌ಗಿದ ಮೆಣ್ಸ್
ಒಗ್ಗರಣೆಗೆ ನೀರುಳ್ಳಿ
ಬೆಳ್ಳುಳ್ಳಿ
ಸಾಸುವೆ
ಅಗ್ರನೆ ಸೊಪ್ಪು

ಬಾಂಡ್ಲಿಲಿ ಎಣ್ಣೆ ಕಾದ್ ಸಾಸುವೆ ಹೊಟ್ಟ್‌ಕನ ಅಗ್ರಣೆ ಸೊಪ್ಪು, ಬೆಳ್ಳುಳ್ಳಿ, ನೀರುಳ್ಳಿ, ಕಾಯಿಮೆಣ್ಸ್ ಇಲ್ಲರೆ ಒಣ್‌ಗಿದ ಮೆಣ್ಸ್ ಮುರ್‌ದ್ ಹಾಕಿ ಲಾಯ್ಕ್‌ಲಿ ಬಾಡ್ಸೊಕು. ಈಗ ಕಾಯಿ ಕೆಂಬಡೆ ಆದರೆ ಅದರ ತಿರ್‌ಳ್ ತೆಗ್ದ್ ಹೋಳು ಕತ್ತರಿಸಿಕಣೆ. ಹಣ್ಣಾದರೆ ಅದರ ತೊಪ್ಪೆ(ಸಿಪ್ಪೆ) ತಿರ್‌ಳ್ ಎರಡರ್ನೂ ತೆಗ್ದ್ ಹೋಳು ಮಾಡಿಕಂಡ್ ಅಗ್ರಣೆಗೆ ಹಾಕಿ ಮೊಗ್‌ಚಿ. ಅದ್‌ಕ್ಕೆ ರುಚಿಗೆ ಉಪ್ಪು ನೀರ್ ಬೇಕಿದ್ದರೆ (ಕಾಯಿಹೂ) ಕಾಯಿತುರಿ. ಹಾಕಿ ಬೆಂದಮೇಲೆ ಇಳ್ಸಿ. ಈಗ ರುಚಿಯಾದ ಕೆಂಬಡೆ ಕಾಯಿ ಸಾರ್ ತಯಾರ್. ಈ ಕೆಂಬಡೆ ಕಾಯಿ ಸಾರ್. ರೊಟ್ಟಿ, ದೋಸೆಗೆ ಬಾರೀ ಲಾಯ್ಕದ ಜೋಡಿ ಕೆಂಬಡೆಕಾಯಿ ಒಳಗೆನ ತಿರ್‌ಳ್‌ನ ತೆಂಗಿನಕಾಯಿ ಹಾಕಿ ಮೊಜ್ಜಿಮಾಡ್ರೆ ಅನ್ನದೊಟ್ಟಿಗೆ ಉಂಬಕೆ ಬಾರಿ ರುಚಿಯಾಗಿದ್ದದೆ. ಸಂಬಾರಸೊಪ್ಪು ಹಾಕಿ ಅಗ್ರಣೆ ಮಾಡೊಕು.






ಹುತ್ತರಿ ಹಬ್ಬ ಅರೆಭಾಷಿಕರ ಪ್ರಮುಖ ಹಬ್ಬ. ಹುತ್ತರಿ ಶಬ್ದ ಕೇರಳದ ಮಲಯಾಳಿ ಪುತ್ತರಿ ಮೂಲ ಪದಂದ ಬಂದುಟ್ಟು. ಪುತ್-ಹೊಸ, ಅರಿ-ಅಕ್ಕಿ ಸೇರಿ ಪುತ್ತರಿ ಆಗುಟ್ಟು. ಇದ್ ಅರೆಭಾಷೆಲಿ ಹುತ್ತರಿ ಆಗುಟ್ಟು. ಈ ಹಬ್ಬ ಸಾಮಾನ್ಯ ಆಗಿ ಜಾಡೇ ನವಂಬರ್ ಇಲ್ಲರೆ ಡಿಸೆಂಬರ್ ತಿಂಗ್ಳ ನಡ್‌ದದೆ. ರೋಹಿಣಿ ನಕ್ಷತ್ರದ ಹುಣ್ಣಿಮೆ ದಿನ ಈ ಹಬ್ಬದ ಆಚರ್‌ಸುದರ್‌ಂದ ನವಂಬರ್‌ಲಿ ಹಬ್ಬ ಆಚರಣೆ ಆದರೆ ಬೆಳ್ಳ ಹುತ್ತರಿಂತ ಹೇಳುವೆ. ಹಬ್ಬಕ್ಕೆ ಗೊತ್ತು ಮಾಡ್ದ ದಿನದಂದ್ ಗೊತ್ತು ಮಾಡ್ದ ಒಳ್ಳೆ ಮೂರ್ತಲಿ ಪಾಡಿ ಇಗ್ಗುತಪ್ಪ ದೇವಸ್ಥಾನಲಿ ಗದ್ದೆಂದ ಕದ್‌ರ್ ಕೊಯ್ದು ಮೇಲೆ ಕೊಡಗ್‌ನ ಎಲ್ಲಾ ಕಡೆ ಕದ್‌ರ್ ತೆಗೆವ ಕಾರ್ಯ ನಡ್ವದೆ. ಕದ್‌ರ್ ತೆಗೆಯಕೆ ಕುಂಬಳಿ, ಗೇರ್, ಆಲ, ಮಾವು ಮತ್ತೆ ಹಲಸ್‌ನ ಸೊಪ್ಪುನ ಸೇರ್‌ಸಿ ಅಚ್ಚಿನಾರ್‌ಲಿ ನೆರೆ ಕಟ್ಟಿ, ಇದರ್ಲಿ ಹೊಸ ಕದ್‌ರ್‌ನ ಸೇರ್‌ಸಿ ದೇವರ ಮುಮ್ಮಗೆ, ಕದ್‌ರ್ ಗುತ್ತಿಗೆ, ಮುಕ್ಕಾಲ್ ಸೇರ್ದಂಗೆ ಹೊಸ ಪಾಯಸ ಮಡಿಕೆಗೆ ಕದ್‌ರ್ ಕಟ್ಟುವೆ. ಈ ಸಂದರ್ಭ ವಿಶೇಷಾಗಿ ಗದ್ದೆಂದ ತಂದ 5 ಹೊಸ ಬತ್ತ ಅದರ್ಲಿ 5 ಅಕ್ಕಿ 3 ಸಣ್ಣ ಕಲ್ಲ್‌ನ ಸೇರ್‌ಸಿ ಪಾಯಸ ತಯಾರ್ ಮಾಡುವೆ. ಈ ಪಾಯಸನ ನೆಲ್ಲಕ್ಕಿ ನಡುಬಾಡೆಲಿ ಬಾಳೆ ಎಲೆಲಿ ಎಲ್ಲರು ಒಟ್ಟು ಸೇರಿ ಊಟಮಾಡ್ದು ಪದ್ಧತಿ. ಹಂಗೇ ಆ ಮನೆಲಿ ಹುಟ್ಟಿದ ಹೊಸ ಕೂಸುಗೆ ಎಲ್ಲರು ಬಾಯಿಗೆ ತುತ್ತು ಕೊಟ್ಟವೆ. ಹುತ್ತರಿ ಹಬ್ಬದ ವಿಶೇಷಾಗಿ ತಂಬಿಟ್ಟ್, ಅಡಿಕೆಹಿಟ್ಟ್, ಕರ್ಜಿಕಾಯಿ, ಹೊದ್‌ಲಿ, ಅವ್‌ಲಕ್ಕಿ ಪಲಹಾರ, ಚಕ್ಕುಲಿ ಹುತ್ತರಿ ಗೆಣ್‌ಸ್ ಗೈಪು, ಸುಂಟಿ ಹೊಸ್ದ ಇನ್ನೂ ತರಾವರಿ ಅಡಿಗೆ ಮಾಡಿ ಊಟ ಮಾಡುವೆ. ಮನರಂಜನೆಗಾಗಿ ಪಟಾಕಿ ಹೊಟ್ಟುಸುದು ಹುತ್ತರಿ ಹಬ್ಬದ ಇನ್ನೊಂದು ವಿಶೇಷ.

## ತಂಬಿಟ್ಟ್

ಬೇಕಾದ ಸಾಮಾನ್

- ಕೊಸ್‌ಲಕ್ಕಿ–1 ಸೇರ್
- ಪಚ್ಚೆ ಬಾಳೆ ಹಣ್ಣ್–25
- ಕಾಯಿ ಹೆರ್ದದ್–1 ಕಾಯಿ
- ಬೆಳಿ ಬೆಲ್ಲ–½ ಕೆ.ಜಿ
- ಬೆಳಿ ಎಳ್ಳ್–100 ಗ್ರಾಂ
- ಕರಿ ಎಳ್ಳ್ –100 ಗ್ರಾಂ
- ಏಲಕ್ಕಿ–10–12
- ಮೆಂತೆ– 5 ಗ್ರಾಂ
- ತುಪ್ಪ– 200 ಗ್ರಾಂ
- ಉಪ್ಪು– ಸ್ವಲ್ಪ



## ಮಾಡುವ ಕ್ರಮ

ಕೊಸ್‌ಲಕ್ಕಿನ ದಪ್ಪ ಅಡಿ ಇರುವ ಓಡುಲಿ ನಿಧಾನ ಉರಿಲಿ ಹೊರಿಯೊಕು. ಅಕ್ಕಿನ ತೊಳ್ದ್ ನೀರ್ ಬಸ್ದ್ ಅಕ್ಕಿ ಚಂಡಿ ಇರ್ಕನೆ ಹೊರ್ದರೆ ಲಾಯ್ಕ್‌ಲಿ ಅರ್‌ಳಿದೆ ಮೆಂತೆ, ಎಳ್ಳ್‌ನ ಪಟ ಪಟ ಸದ್ದ್ ಬಾಕೆಮುಟ್ಟ ಹೊರಿಯೊಕು. ಅಕ್ಕಿ ಮತ್ತೆ ಮೆಂತೆನ ಸೇರಿಸಿ ಬೀಸಿಕಂಡ್ (ಮಿಕ್ಸಿಲಿ ಹೊಡಿ ಮಾಡಿಕಣಕ್) ಈ ಹೊಡಿಗೆ ಎಳ್ಳ್, ಬೆಲ್ಲದ ಹೊಡಿ, ಹೆರ್ದಕಾಯಿ, ಏಲಕ್ಕಿ ಹೊಡಿ, ಒಂದು ಚೂರು ಉಪ್ಪು ಸೇರ್ಸಿ ಮಿಶ್ರ ಮಾಡಿಕಂಬೊಕು. ಈ ಹೊಡಿಗೆ ಲಾಯ್ಕ್‌ಲಿ ಹಣ್ಣಾದ ಪಚ್ಚೆಬಾಳೆ ಹಣ್ಣ್ ತುಪ್ಪ ಹಾಕಿ ಲಾಯ್ಕ್‌ಲಿ ಕಲ್ಸಿರೆ ಹುತ್ತರಿ ಹಬ್ಬದ ವಿಶೇಷ ತಂಬಿಟ್ಟ್ ತಿಂಬಕೆ ತಯಾರಾದೆ.




## ಅಕ್ಕಿ ಪಾಯಸ
(ಹುತ್ತರಿ ವಿಶೇಷ ಚಪ್ಪೆ ಪಾಯಸ)

### ಬೇಕಾಗುವ ಸಾಮಾನ್‌ಗ

ಬೆಳ್ತಕ್ಕಿ–1 ಸೇರ್
ಕಾಯಿ–2
ಮೆಂತೆ–5–6 ಕಾಳ್
ಏಲಕ್ಕಿ 5–6

### ಮಾಡುವ ಕ್ರಮ

ಅನ್ನದ ತಪ್ಪಲೆಲಿ ನೀರ್ ಕೊದಿ ಬಂದ ಮೇಲೆ ಅಕ್ಕಿ ತೊಳ್ದ್ ಹಾಕೊಕು. ಅನ್ನ ಬೆಂದ್ ಪಾಯ್ಸದ ರೂಪಕೆ ಬರೊಕು. ಆಮೇಲೆ ಕಾಯಿ ತುರಿ, ಮೆಂತೆ ಹೊರ್ದ್ ಹೊಡಿ ಮಾಡ್ದ್, ಯಾಲಕ್ಕಿ ಹೊಡಿ ಹಾಕಿ ನಿಧಾನ ಉರಿಲಿ ಸ್ವಲ್ಪ ಹೊತ್ತು ಅಡಿ ಹಿಡಿಯದಂಗೆ ಕೈಯಾಡ್ಸಿಕಂಡ್ ಇದ್ದ್ ಇಳ್ಸೊಕು.

ಈಗ ಹುತ್ತರಿ ಸ್ಪೆಷಲ್ ಚಪ್ಪೆ ಪಾಯ್ಸ ತಯಾರ್ ಬೇಕರೆ ಸಕ್ಕರೆ ತುಪ್ಪ ಹಾಕಂಡ್ ತಿನ್ನಕ್.

## ಅಡ್ಕೆ ಹಿಟ್ಟ್



### ಬೇಕಾಗುವ ಸಾಮಾನ್‌ಗ

ಅಕ್ಕಿಹೊಡಿ– 3 ಗ್ಲಾಸ್
ಬೆಲ್ಲ–1/2 ಕೆ.ಜಿ
ತೆಂಗಿನ ತುರಿ– 1 ಗಡಿದ್
ಏಲಕ್ಕಿ–6–8
ಉಪ್ಪು –ರುಚಿಗೆ

### ಮಾಡುವ ಕ್ರಮ

6 ಗ್ಲಾಸ್ ನೀರ್‌ಗೆ 1/2 ಕೆ.ಜಿ ಬೆಲ್ಲ ಹಾಕಿ ಕೊದಿಯಕಾಕನ ಹೊರ್ದಿಸಿದ 3 ಗ್ಲಾಸ್ ಅಕ್ಕಿಹೊಡಿ, ಏಲಕ್ಕಿ ಹೊಡಿ, ಒಂದು ಚೂರು ಉಪ್ಪು ಹಾಕಿ ಬಂದ ಉಕ್ಕ್‌ರಿಸಿಕಂಡ್ ಕಡಂಬಿಟ್ಟ್ ಮಾಡ್ದಂಗೆ ಸಣ್ಣ ಸಣ್ಣ ಅಡ್ಕೆ ಗಾತ್ರಲಿ ಉಂಡೆ ಕಟ್ಟಿ ಕಳ್ಸಿಗೆಲಿ ಬೇಯಿಸಿರೆ ಘಮ ಘಮ ಅಡ್ಕೆ ಹಿಟ್ಟ್ ತಿಂಬಕೆ ರೆಡಿ.

## ಕರ್ಜಿಕಾಯಿ

### ಬೇಕಾಗುವ ಸಾಮಾನ್‌ಗ

ಮೈದಾ–1 ಪಾವು
ಚಿರೋಟಿ ರವೆ–1 ಪಾವು
ಕೊಬ್ರಿಕಾಯಿ–2
ಸಕ್ಕರೆ ಹೊಡಿ–1 ಪಾವು
ಗಸೆ ಗಸೆ –1/2 ಪಾವು
ಎಣ್ಣೆ –1 ಲೀಟರ್
ಉಪ್ಪು– ರುಚಿಗೆ ಬೇಕಾದಷ್ಟ್

ಮೈದಾಹೊಡಿಗೆ ಚಿರೋಟಿ ರವೆ, ಸ್ವಲ್ಪ ಎಣ್ಣೆ, ಚೂರು ಉಪ್ಪು, ನೀರ್ ಸೇರ್ಸಿಕಂಡ್ ಚಪಾತಿ ಬಂದಕ್ಕಿಂತ ಸ್ವಲ್ಪ ಗಟ್ಟಿ ಕಲ್ಸಿಕಂಬೊಕು.

ಕೊಬ್ರಿ ಕಾಯಿ ತುರಿ, ಹೊರ್ದ ಗಸೆಗಸೆ, ಸಕ್ಕರೆ ಹೊಡಿ, ಏಲಕ್ಕಿ ಹೊಡಿ ಸೇರ್ಸಿ ಕಲ್ಸಿ ಹೂರಣ ಮಾಡಿಕಂಬೊಕು.

ಮೈದಾ ಹಿಟ್ಟ್‌ನ ಸಣ್ಣ ಉಂಡೆ ಮಾಡಿ, ಲಟ್ಟ್‌ಸಿ ಅದರೊಳಗೆ ಹೂರಣ ಹಾಕಿ ಕರ್ಜಿಕಾಯಿ ಅಚ್ಚ್‌ಲಿ ಒತ್ತಿ, ಕರೆಗೆ ಬಂದ ಬಂದನ ತೆಗ್ದ್ ಕಾದ ಎಣ್ಣೆಗೆ ಹಾಕಿ ಕರಿಯೊಕು.

ಈಗ ಗರಿ ಗರಿ ಕರ್ಜಿಕಾಯಿ ತಿಂಬಕೆ ರೆಡಿ.






## ಹುತ್ತರಿ ಗೆಣ್‌ಸ್ ಗೈಪು

### ಬೇಕಾಗುವ ಸಾಮಾನ್‌ಗ

ಹುತ್ತರಿ ಗೆಣ್‌ಸ್: 1 ಕೆ.ಜಿ
ಕಾಯಿ ಹೆರ್ದದ್- 1 ಗಡಿ
ಎಣ್ಣೆ-2 ಚಮಚ
ಒಣ್‌ಗಿಲ್ ಮೆಣ್‌ಸ್-8-10
ಹುಣ್‌ಸೆ ಹಣ್ಣ್- ರುಚಿಗೆ ಬೇಕಾ
ಉಪ್ಪ್ - ಬೇಕಾಗುವಷ್ಟ್
ಅರ್‌ಸಣ
ಸಂಬಾರ ಹೊಡಿ 1 ಚಮಚ
ನೀರುಳ್ಳಿ - 1
ಜೀರಿಗೆ

ದಪ್ಪ ಪಾತ್ರೆಲಿ ಮಣ್ಣ್‌ನ ಚಟ್ಟಿ ಇದ್ದರೆ ಒಳ್ಳೆದ್, ಅದರಲಿ ಸ್ವಲ್ಪ ಎಣ್ಣೆ ಬಿಸಿ ಮಾಡಿಕೆ ಇಟ್ಟ್ ಸಾಸಿವೆ ಒಗ್ಗರಣೆ ಹಾಕೊಕು. ಮತ್ತೆ ಅದ್‌ಕ್ಕೆ ಗೆಣ್‌ಸ್ ಹಾಕಿ ಒಲೆಲಿ ಬೇಯಕೆ ಇಡೊಕು. ಮೇಲೆ ಹೇಳ್ದಂತಹ ವಸ್ತುಗಳ್‌ನ ಎಲ್ಲಾ ಸೇರ್‌ಸಿ ಮಸಾಲೆ ಆಡ್ಡೊಕು. ಬೆಂದ ಗೆಣಸ್‌ಗೆ ಮಸಾಲೆ ಸೇರ್‌ಸಿ ಸಾರ್‌ನ ಕೊದ್‌ಸಕು. ಆಗ ಹುತ್ತರಿ ಹಬ್ಬಲಿ ಮಾಡುವಂತಹ ಸ್ಪೇಷಲ್ ಹುತ್ತರಿ ಗೆಣ್‌ಸ್ ಸಾರ್ ರೆಡಿಯಾದೆ.

## ಚಕ್ಕುಲಿ

### ಬೇಕಾಗುವ ಸಾಮಾನ್‌ಗ

ಅಕ್ಕಿಹೊಡಿ- 2 ಪಾವು
ಹುರಿಗಡ್ಲೆ- 1 ಪಾವು
ಜೀರಿಗೆ - 1 ಟೀ ಸ್ಪೂನ್
ಬೆಣ್ಣೆ - 200 ಗ್ರಾಂ
ಎಣ್ಣೆ - ಕರಿಯಕೆ

### ಮಾಡುವ ಕ್ರಮ

ಅಕ್ಕಿಹೊಡಿ, ಹುರಿಗಡ್ಲೆ, ಜೀರಿಗೆ, ಉಪ್ಪು ಈ ಎಲ್ಲಾ ಸಾಮಾನ್‌ಗಳ್ನ ನೀರ್ ಹಾಕಿ ಲಾಯ್ಕ್ ಕಲ್ಸಿಕಂಡ್, ಬೆಣ್ಣೆ ಸೇರಿಸ್ಸಿ ಕಲ್ಸಿ ಹದಕೆ ತರಕು. ಕಾರ ಬೇಕರೆ ಮೆಣ್ಸ್ ಹೊಡಿ ಸೇರ್ಸಿಕಣಕ್. ಚಕ್ಕುಲಿ ಒಲ್ಳ್‌ಲಿ ಒತ್ತಿ ಎಣ್ಣೆಲಿ ಹೊರಿಯೊಕು.



## ಸುಂಟಿ ಪಜ್ಜಿ

### ಬೇಕಾಗುವ ಸಾಮಾನ್‌ಗ

ಸುಂಟಿ- 100 ಗ್ರಾಂ
ತೆಂಗಿನಕಾಯಿ-1
ಹಸಿಮೆಣ್ಸ್-6-8
ಹುಣಸೆ ಹಣ್ಣ್-ಸ್ವಲ್ಪ
ಉಪ್ಪು-ರುಚಿಗೆ ಬೇಕಾದಷ್ಟ್.

### ಮಾಡುವ ಕ್ರಮ

ಶುಂಠಿನ ಸಣ್ಣ ಸಣ್ಣ ತುಂಡು ಮಾಡಿಕಂಡ್, ತೆಂಗಿನ ತುರಿ, ಹುಣಸೆ ಹಣ್ಣ್, ಹಸಿಮೆಣ್ಸ್, ಉಪ್ಪು ಹಾಕಿ ಮಿಕ್ಸಿಲಿ ಅರ್ದರೆ ಶುಂಠಿ ಪಜ್ಜಿ ರೆಡಿ.






## ನೆರ್ದ ಮೊದುವೆ (ಋತುಶಾಸ್ತ್ರ)

ಹತ್ತ್ ಕುಟುಂಬ ಹದ್ನೆಂಟ್ ಗೋತ್ರದ ಅರೆಬಾಸಿಕ ಕುಟುಂಬಲಿ ಸುರೂಗೆ ಗೂಡೆ ಮೈನೆರ್ದರೆ (ಪ್ರಾಯಕ್ಕೆ ಬಂದರೆ) ಆ ಕುಟುಂಬಕ್ಕೆ 16 ದಿನ ಹೊಲೆ (ಸೂತಕ) ಇದ್ದದೆ. ಯಾವುದೇ ಶುಭ ಕಾರ್ಯ ಮಾಡಿಕೆ ಬೊತ್ತ್. ಐನ್ ಮನೆಲಿ ದೀಪ ಇಸಿಕೆ ಬೊತ್ತ್. ದೇವಸ್ಥಾನಕ್ಕೆ ಹೋಕೆ ಬೊತ್ತ್. ಇದ್ ಕ್ರಮ.

ಇನ್ನ್ ಸುರುಗೆ ಮೈನೆರ್ದ ಗೂಡೆನ 16 ದಿನಲಿ ಮಡಿವಾಳರ್ನ ಕರ್ಸಿ ಶುದ್ಧ ಮಾಡ್ಸಿ ಹೊಲೆ ತೆಗ್ಸುವೆ. ಅಂದ್ ಮನೆವು ಊರವು ನೆಂಟರಿಷ್ಟರಿಗೆ ಹೇಳಿಕರ್ದ್ ಗದ್ದಾಳ ಊಟ ಮಾಡುವೆ. ಮೈನೆರ್ದ ಗೂಡೆಗೆ ಮೈ ತಂಪಾಕೆ ಮುದ್ದೆ ಹಿಟ್ಟ್. ಮೈ ಬಾಕೆ ಎಳ್ಳ್‌ಮೆಂತೆ ಮಾಡಿಕೊಡ್ದು ವಿಶೇಷ ಆಗಿಟ್ಟು.

## ಮುದ್ದೆ ಹಿಟ್ಟ್



### ಬೇಕಾಗುವ ಸಾಮಾನ್‌ಗ

ಕೊಸ್‌ಲಕ್ಕಿ – ½ ಕೆ.ಜಿ
ಹಸ್‌ನ ತುಪ್ಪ – ½ ಕೆ.ಜಿ.
ಬೆಲ್ಲ – ½ ಕೆ.ಜಿ.
ತೆಂಗ್‌ನ ಕಾಯಿ–1
ಮೆಂತೆ–1 ಚಮಚ
ಉಪ್ಪು–ಸ್ವಲ್ಪ
ನೀರ್– ½ ಲೀ.

### ಮಾಡುವ ಕ್ರಮ

ಕೊಸ್‌ಲಕ್ಕಿನ ಹೊದ್‌ರಿ ಬಾಕೆಮುಟ್ಟ ಹೊರ್‌ದ್ ಹೊಡಿ ಮಾಡಕು. ½ ಲೀಟರ್ ನೀರ್‌ನ ಕೊದ್‌ಸಿ ಅದ್‌ಕ್ಕೆ ತೆಂಗಿನ ತುರಿ, ಹಸ್‌ನ ತುಪ್ಪ, ಬೆಲ್ಲದ ಪಾಕದ ನೀರ್, ಮೆಂತ್ಯೆ ಹೊಡಿ, ಉಪ್ಪು ರುಚಿಗೆ ಹಾಕಿ. ಅಕ್ಕಿ ಹೊಡಿ ಹಾಕಿ ತಿರ್‌ಗಿಸಿ ಇಳ್ಸಿ. ಅದರ ಮೇಲೆ ತೆಂಗಿನ ಕಾಯಿ ತುಪ್ಪ ಹಾಕಿ ತಿನ್ನೊಕು.

## ಎಳ್ಳ್‌ಮೆಂತೆ

### ಮಾಡುವ ಕ್ರಮ

### ಬೇಕಾಗುವ ಸಾಮಾನ್‌ಗ

ಎಳ್ಳ್ –1 ಕೆ.ಜಿ.
ಮೆಂತೆ – ಅರ್ಧ ಕೆ.ಜಿ.
ಕೊಬ್ಬರಿಕಾಯಿ – 4
ಹಸ್‌ನ ತುಪ್ಪ
ಎಣ್ಣೆ



ಮೆಂತೆನ ತೊಳ್ದ್ ಒಣ್‌ಗ್‌ಸಿ, ಹೊರ್ದ್ ಬೀಸಿಹೊಡಿ ಮಾಡಿಕಣಕು. ಎಳ್ಳ್‌ನ ಕೂಡ ಸೋಸಿ ತೊಳ್ದ್ ಒಣ್‌ಗ್‌ಸಿ ತೆರಿ ತೆರಿ ಕುಟ್ಟಿ ಹೊಡಿ ಮಾಡಿಕಣಕು. ಕಾಯಿನ ಹೆರ್ದ್ ಎಣ್ಣೆ ತುಪ್ಪ ಎರಡನ್ನೂ ಒಟ್ಟಿಗೆ ಕಾಸಿ ಕಾಯಿನ ಸೇರ್ಸಿ ಹೊರಿಯಕು ಅದ್ ಕೆಂಪಾಕನ ಕುಟ್ಟಿ ಹೊಡಿ ಮಾಡ್ದ ಬೆಲ್ಲನ ಹಾಕಿ ಲಾಯ್ಕ ಮೊಗ್‌ಚಕು. ಅದ್ ಏಲ್ದ ಮೇಲೆ ಮೆಂತೆ ಹೊಡಿನ ಹಾಕಿ ಮೊಗ್‌ಚಕು. ಲಾಯ್ಕ ಮಿಸ್ರ ಆಕನ ಎಳ್ಳ್ ಸೇರ್ಸಿ ತಿರ್‌ಗ್‌ಸಿ ಇಳ್ಸಿ ರುಚಿಗೆ ಉಪ್ಪು ಹಾಕಕು. ಎಳ್ಳ್ ಮೆಂತೆನ ಡಬ್ಬಿಲಿ ಮುಚ್ಚಿ ತುಂಬಾ ಸಮೆವರೆಗೆ ಮಡ್ಕಣಕ್. ಇದ್ ಮೈನೆರ್ದ ಗೂಡೆಗಳಿಗೆ, ಬಾಣ್ತಿಗಳಿಗೆ ಮೈ ಬಾಕೆ ಕೊಟ್ಟವೆ. ಹಂಗೇ ಈ ಎಳ್ಳ್ ಮೆಂತೆನ ಯಾರ್ ಬೇಕಾದರೂ ತಿನ್ನಕ್.




ಕೊಡಗ್‌ನ ಆರೆಮಾಪೋರ ಮೊದುವೆ ಪದ್ಧತಿ ಬಾರೀ ವಿಶೇಷ ಆಗುಳ್ಳ. ಇಲ್ಲಿ ಗಂಡ್ ಮತ್ತೆ ಪೊಣ್ಣ್ ಕೇಳ್ತ್ರ ಮೊದುವೆ ತ್ಯದ ಗೂಡೆನ ಕುಟುಂಬದವ್ವು ಇಬ್ಬರೂ ಒಂದೇ ಸಮನಾಗಿ ನಿತ್ ನಡ್ಸುವ ಶುಭಕಾರ್ಯ. ಇಲ್ಲಿ ಶಾಸ್ತ್ರ ಪದ್ಧತಿಗ ತುಂಬಾ ಇದ್ದದೆ. ತ್ಯದುನ ಕಡೆಂದ ಗೂಡೆನ ಮನೆಗೆ ಗೂಡೆ ನೋಡಿಕೆ ಹೋಗುವಲ್ಲಿಂದ ಮೊದುವೆ ಕಳ್ಳ್ ತುಪ್ಪ ತಾವಲ್ಲಿವರೆಗೆ ಬಾರೀ ಸಂಪ್ರದಾಯ ಪ್ರಕಾರ ಆಚರಣೆಗ ನಡ್ದದೆ.

ಮೊದುವೆ ಜಂಬರಲಿ ವಿಶೇಷ ಆಗಿ ಮಾಡುವ ಅಡಿಗೆಗ ಕೇಳಿ :
ಹಂದಿಗ್ಯೆಪು, ಕೋಳಿಗ್ಯೆಪು, ತುಪ್ಪದನ್ನ, ಕೇಸರಿಬಾತ್, ಪಾಯಸ, ಬೆಲ್ಲದ ಪಲ್ಯ



## ತುಪ್ಪದನ್ನ

<u>ಬೇಕಾಗುವ ಸಾಮಾನ್‌ಗ</u> :

| | |
|---|---|
| ಸಣ್ಣಕ್ಕಿ | ಹಿಡಿ ಸಕ್ಕರೆ |
| ಹಸ್‌ನ ತುಪ್ಪ | ಉಪ್ಪ್ |
| ಲವಂಗ | ಬೆಳ್ಳುಳ್ಳಿ |
| ಪಟ್ಟೆ | ನೀರುಳ್ಳಿ |
| ಯಾಲಕ್ಕಿ | ದ್ರಾಕ್ಷಿ |
| ಒಳ್ಳೆಮೆಣ್ಸ್ | ಗೇರ್‌ಬೀಜ |



### ಮಾಡುವ ಕ್ರಮ

ಸಣ್ಣಕ್ಕಿನ ತೊಳ್ದ್ ನೀರ್ ಆರ್ಸಕು. ಪಾತ್ರೆಲಿ ಹಸ್‌ನತುಪ್ಪ ಕಾಯಕನ ಬೆಳ್ಳುಳ್ಳಿ, ನೀರುಳ್ಳಿ ಬಾಡ್ಸಿ ಲವಂಗ ಪಟ್ಟೆ ಯಾಲಕ್ಕಿ ದ್ರಾಕ್ಷಿ ಗೇರ್‌ಬೀಜ ಹಾಕಿ ಕಾಸಿಕಣಕು. ಈಗ 1 ಕ್ಕೆ 2 ಅಳತೆ ಲೆಕ್ಕಲಿ ನೀರ್ ಹಾಕಿ ಕೊದಿಯಕನ ಅದ್ಕೆ ಹಿಡಿ ಸಕ್ಕರೆ ಹಾಕಿ ಅಕ್ಕಿ ಹಾಕಿ ತಿರ್‌ಗ್‌ಸಿ ಬಾಳೆ ಎಲೆಲಿ ಮುಚ್ಚಿ ಮಡ್ಗಕು. ಬೆಂಕಿ ಕಮ್ಮಿ ಮಾಡಿ ಕೆಂಡಲಿ ಬೇಸಿರೆ ತುಪ್ಪದನ್ನ ತಯಾರ್. ತುಪ್ಪದನ್ನಕ್ಕೆ ಕೋಳಿಗ್ಯೆಪು ಇಲ್ಲರೆ ಮೊಟ್ಟೆ ಸಾರ್ ಲಾಯ್ಕಾದೆ.

## ಮಾಯಿನಹಣ್ಣ್‌ನ ಪೊಜ್ಜಿ

<u>ಬೇಕಾಗುವ ಸಾಮಾನ್‌ಗ</u> :

ಮಾಯಿನ ಹಣ್ಣ್
ಕಾಯಿ
ಮೊಸ್‌ರ್
ನೀರುಳ್ಳಿ
ಹಸಿಮೆಣ್ಸ್
ಸಂಬಾರಸೊಪ್ಪು
ಉಪ್ಪ್.

### ಮಾಡುವ ಕ್ರಮ

ಮಾಯಿನಹಣ್ಣ್‌ನ ತೊಪ್ಪೆ ಚೊಲ್ಲಿ ಒಂದು ಪಾತ್ರೆಗೆ ಹಾಕಿ ಕಾಯಿನೊಟ್ಟಿಗೆ ಮೆಣ್ಸ್, ನೀರುಳ್ಳಿ, ಉಪ್ಪು ಹಾಕಿ ಪೊಜ್ಜಿ ಮಾಡಿಕಂಡ್ ಸೇರ್ಸಿ ಸಂಬಾರ ಸೊಪ್ಪು ಹಾಕಿ ಮ್ಯಾಲೆಂದ ಅಗ್ರಣೆ ಹಾಕೊಕು. ಇಲ್ಲರೆ ಮಾಯಿನ ಹಣ್ಣ್‌ಗೆ ಮೊಸ್‌ರ್‌ಲಿ ಕಾಯಿಮೆಣ್ಸ್, ನೀರುಳ್ಳಿ, ಸಂಬಾರಸೊಪ್ಪು ಕೊಯ್ದು ಹಾಕಿ ರುಚಿಗೆ ಉಪ್ಪು ಹಾಕಿರೆ ಬಾರಿ ಲಾಯ್ಕ್ ಆದೆ.

## ಕೋಳಿಗ್ಯೆಪು

<u>ಬೇಕಾಗುವ ಸಾಮಾನ್‌ಗ</u> :

ಕೋಳಿಮಾಸ
ತೆಂಗಿನಕಾಯಿ ಮಸಾಲೆ



### ಮಾಡುವ ಕ್ರಮ

ಕೋಳಿಮಾಸನ ತೊಳ್ದ್ ನೀರ್ ಬಗ್ಗಿಸ್ಸಿ, ಉಪ್ಪು, ಮೆಣ್ಸ್, ಅರ್‌ಶಣ ಹಾಕಿ ಕಲ್ಸಿ ಅರ್ಧ ಗಂಟೆ ಮಡ್ಗಕು. ಅಗ್ರಣೆಗೆ ಎಣ್ಣೆ, ನೀರುಳ್ಳಿ ಹಾಕಿ ಬಾಡ್ಸಿ, ಮಾಸನ ಹಾಕಿ ತಿರ್‌ಗ್‌ಸಿ ಮುಚ್ಚಿ ಬೇಸಕು. ಬೆಂದ ಮಾಸಕ್ಕೆ ಕಾಯಿಕಡ್ದ್ ಕೋಳಿಮಾಸ ಮಸಾಲೆನ ಸೇರ್ಸಕು. ಲಾಯ್ಕ ಕೊದ್ದಮೇಲೆ. ಕಾಸುಳಿ ಸೇರ್ಸಿ ಇಳ್ಸಿರೆ ಗಮ ಗಮ ಕೋಳಿ ಗ್ಯೆಪು ತಯಾರ್. ಈ ಕೋಳಿ ಗ್ಯೆಪು ಇಡಮಣೆ ಹಿಟ್ಟ್, ರೊಟ್ಟಿ, ಬಟ್ಲಿಟ್ಟ್, ಕಡ್‌ಂಬಿಟ್ಟ್, ತುಪ್ಪದನ್ನ ಎಲ್ಲದಕ್ಕೂ ಆದೆ.

## ಕಬಾಬ್

ಬೇಕಾಗುವ ಸಾಮಾನ್‌ಗ :

ಕೋಳಿಮಾಸ
ಜೋಳದ ಹೊಡಿ
ಮೆಣ್ಸ್ ಹೊಡಿ
ಹಣ್ಣ್ ರವೆ
ಉಪ್ಪ್
ನಿಂಬುಳಿ
ಅರ್‌ಸಣ
ಸುಂಟಿ
ಬೆಳ್ಳುಳ್ಳಿ
ಮೊಟ್ಟೆ
ಎಣ್ಣೆ

### ಮಾಡುವ ಕ್ರಮ

ಅರ್ದ ಕೆ.ಜಿ. ಕೋಳಿಮಾಸನ ತುಂಡುಮಾಡಿ ತೊಳ್ದ್ ನೀರ್ ಆರ್ಸಿಕಣಕು. 2 ಚಮಚ ಜೋಳದ ಹೊಡಿ, 1 ಚಮಚ ರವೆ, ಮೆಣ್ಸ್‌ಹೊಡಿ, ಉಪ್ಪು, ಅರ್‌ಶಣ, ಬೆಳ್ಳುಳ್ಳಿ, ಸುಂಟಿ ಗುದ್ದಿಹೊಡಿ ಮಾಡ್ದರ ಒಟ್ಟಿಗೆ ಸೇರ್ಸಿ, ಮೊಟ್ಟೆನೊಟ್ಟಿಗೆ ಕಲ್ಸಿಕಣಕು. ಅದ್ಕೆ ನಿಂಬುಳಿ ಹಿಂಡಿ ಕೋಳಿಮಾಸಕ್ಕೆ ಲಾಯ್ಕ ಮೆತ್ತಕು. ಈ ಮಿಶ್ರಣನ ಅರ್ಧ ಗಂಟೆ ಮೊಡ್ಗಿ ಕಾದ ಎಣ್ಣೆಲಿ ನಿದಾನಕ್ಕೆ ಕಾಸಕು. ಈಗ ಕೋಳಿ ಕಬಾಬ್ ತಯಾರ್.

## ಕೀರ್ ಪಾಯಿಸ

ಬೇಕಾಗುವ ಸಾಮಾನ್‌ಗ :

ಶ್ಯಾವಿಗೆ
ಸಬ್ಬಕ್ಕಿ
ಸಕ್ಕರೆ
ಹಾಲ್
ಗೇರ್‌ಬೀಜ
ದ್ರಾಕ್ಷಿ
ಯಾಲಕ್ಕಿ
ಹಸ್‌ನ ತುಪ್ಪ
ರುಚಿಗೆ ಉಪ್ಪ್.

### ಮಾಡುವ ಕ್ರಮ:

ಶ್ಯಾವಿಗೆ, ಸಬ್ಬಕ್ಕಿ, ಗೇರ್‌ಬೀಜ, ದ್ರಾಕ್ಷಿ, ಇದರ್‍ನ ಬೇರೆ ಬೇರೆಯಾಗಿ ತುಪ್ಪಲಿ ಹೊರ್ಕಣಕು. ಈಗ ಹಾಲ್ ಬಿಸಿಯಾಕನ ಹೊರ್ದ ಸಬ್ಬಕ್ಕಿನ ಹಾಕಿ ಸ್ವಲ್ಪ ಬೇಸಿಕಣಕು. ಶ್ಯಾವಿಗೆನ ಸೇರ್ಸಿ ಒಟ್ಟಿಗೆ ಸ್ವಲ್ಪ ಬೇಯಕನ ಸಕ್ಕರೆ, ರುಚಿಗೆ ಉಪ್ಪು, ಗಮನಕ್ಕೆ ಯಾಲಕ್ಕಿ ಸೇರ್ಸಿ ಬೇಸಕು. ಕಡೇಗೆ ಹೊರ್ದ ಗೇರ್‌ಬೀಜ, ದ್ರಾಕ್ಷಿ ಸೇರ್ಸಿ ಮೇಲೆಂದ ಸ್ವಲ್ಪ ತುಪ್ಪ ಹಾಕಿ ಬಿಸಿ ಇರ್ಕನ ಇಲ್ಲರೆ ತಣ್ಣಂಗಾದ ಮೇಲೆ ತಿನ್ನೊಕು

## ಕೇಸರಿಬಾತ್

ಬೇಕಾಗುವ ಸಾಮಾನ್‌ಗ :

ರವೆ
ತುಪ್ಪ
ಸಕ್ಕರೆ
ದ್ರಾಕ್ಷಿ
ಗೇರ್‌ಬೀಜ
ಲವಂಗ
ಪಟ್ಟೆ
ಯಾಲಕ್ಕಿ
ಬಣ್ಣ

### ಮಾಡುವ ಕ್ರಮ

ರವೆನ ಹಸ್‌ನ ತುಪ್ಪಲಿ ಲಾಯ್ಕ ಹೊರ್ಕಣಕು. ಬಾಂಡ್ಲಿಲಿ ತುಪ್ಪ ಕಾಸಿ ಲವಂಗ, ಪಟ್ಟೆ, ದ್ರಾಕ್ಷಿ ಗೇರ್‌ಬೀಜನ ಹಾಕಿ ಕೆಂಪಾದ ಮೇಲೆ 1 ಅಳ್ತೆ ರವೆಗೆ ಅಳ್ತೆ ನೀರ್ ಹಾಕಿ ಕೊದಿಯಕನ ಬಣ್ಣ ಸೇರ್ಸಿ ರವೆನ ಹಾಕಿ ಲಾಯ್ಕ ತಿರ್‌ಗ್‌ಸಕು. ಅದ್ ಬೇಯಕನ ಬೇಕಾದಷ್ಟ್ ಸಕ್ಕರೆ ಹಾಕಿ ಯಾಲಕ್ಕಿ ಹೊಡಿಮಾಡಿ ಸೇರ್ಸಿಕಂಡ್ ಲಾಯ್ಕ ಮೊಗ್‌ಚಿ ಇಳ್ಸಿರೆ ಕೇಸರಿಬಾತ್ ತಯಾರ್. ಕೇಸರಿಬಾತ್‌ಗೆ ನೀರ್‌ನ ಬದ್‌ಲ್ ಹಾಲ್ ಹಾಕಕ್.



## ಮಾಯಿನ ಕಾಯಿನ ಅಡಂಗಾಯಿ



**ಬೇಕಾಗುವ ಸಾಮಾನ್‌ಗ :**

ಗೋ ಮಾಯಿನಕಾಯಿ
ಉಪ್ಪು
ಮೆಣ್ಸ್‌ಹೊಡಿ
ಅರ್‌ಶಣ
ಎಣ್ಣೆ
ಸಾಸುವೆ
ಅಗ್ರಣೆ ಸೊಪ್ಪು
ಇಂಗ್

### ಮಾಡುವ ಕ್ರಮ

ಗೊಮಾವ್‌ನ ಕಾಯಿನ ಮರಂದ ಕೊಯ್ದ್ ಬೀಳ್‌ಸದೆ ತಂದ್ ಕೊಯ್ದ್ ಸಣ್ಣ ಹೋಳುವಾಡಿ ಉಪ್ಪು ಅರ್‌ಶಣ ಮೆಣ್‌ಸ್‌ನ ಹೊಡಿ ಬೆಳ್ಳುಳ್ಳಿ ಹಾಕಿ ಒಗ್ಗರಣೆ ಮಾಡಿ. ಒಗ್ಗರಣೆಗೆ ಎಣ್ಣೆ ಸಾಸುವೆ ಬೆಳ್ಳುಳ್ಳಿ ಕರಿಬೇವು ಸೊಪ್ಪು ಹಾಕಿ ಮುಚ್ಚಿಡಿ. (ಇದರ್ನ ಬ್ಯಾಗ ಮುಗ್‌ಸೊಕು)

## ಉಪ್ಪುಗೆ ಹಾಕಿದ ಮಾಯಿನ ಹಣ್ಣ್ ಸಾರ್



**ಬೇಕಾಗುವ ಸಾಮಾನ್‌ಗ :**

ಉಪ್ಪುಗೆ ಹಾಕಿದ ಮಾಯಿನ ಹಣ್ಣ್
ಬೆಲ್ಲ
ಬೆಳ್ಳುಳ್ಳಿ
ಹಂದಿಮಾಸದ ಮಸಾಲೆ
ಎಣ್ಣೆ

### ಮಾಡುವ ಕ್ರಮ

ಮಾಯಿನ ಹಣ್ಣ್‌ನ ತೊಪ್ಪೆ ತೆಗ್ದ್ ಅಗ್ರಣೆಗೆ ಎಣ್ಣೆ ಸಾಸುವೆ, ಬೆಳ್ಳುಳ್ಳಿ ಅಗ್ರಣೆಸೊಪ್ಪು ಹಾಕಿ ಬೆಲ್ಲ ಹಾಕಿ ಬೆಲ್ಲ ಕರಗಿದ ಮೇಲೆ ಮಾಯಿನ ಹಣ್ಣ್ ಸ್ವಲ್ಪ ನೀರ್, ಮೆಣ್ಸ್, ಅರ್‌ಶಿಣ ಹಾಕಿ ಹಂದಿಮಾಸದ ಮಸಾಲೆ ಹಾಕಿ ಲಾಯ್ಕ ಕೊದ್ಸಿ ನೀರ್ ಆರ್ಸ್‌ಕು. ಈ ಪಾಕನ ಸುಮಾರ್‌ದಿನ ಡಬ್ಬಿಲಿ ಮುಚ್ಚಿ ಮಡ್ಕಣಕ್.

## ಬೆಳ್ಳರಿ ಪಲ್ಯ

**ಬೇಕಾಗುವ ಸಾಮಾನ್‌ಗ :**

ಬೆಳ್ಳರಿಕಾಯಿ ಇಲ್ಲರೆ ಹಣ್ಣ್ ಕಾಯಿ
ನೀರುಳ್ಳಿ
ಕಾಯಿಮೆಣ್ಸ್
ಎಣ್ಣೆ
ಉಪ್ಪು

### ಮಾಡುವ ಕ್ರಮ

ಬೆಳ್ಳರಿ ಕಾಯಿನ ತಿರ್‌ಳ್ ತೆಗ್ದ್ ತೆಳ್ಳಂಗೆ ಉದ್ದುದ್ದ ಹೋಳುಮಾಡಿಕಣಕು. ಪಾತ್ರೆಲಿ ಎಣ್ಣೆ ಮೊಡ್ಗಿ ಸಾಸುವೆ ಹೊಟ್ಟ್‌ಕನ ಅಗ್ರಣೆ ಸೊಪ್ಪು ಒಡ್ದ ಕಾಯಿಮೆಣ್ಸ್ ನೀರುಳ್ಳಿ ಹಾಕಿ ಬಾಡ್ಸಿ ಬೆಳ್ಳರಿ ಹೋಳುಗಳ್ನ ಹಾಕಿ ಮೊಗ್‌ಚಕು. ಅದ್ಕೆ ಉಪ್ಪು ಸೇರ್ಸಿ ಹಂಗೆ ಎಣ್ಣೆಲಿ ತಿರ್‌ಗ್‌ಸ್ತಿರಕು. ಜಾಸ್ತಿ ನೀರ್ ಸೇರ್‌ಸ್‌ಕಾಗದ್, ಕಡೇಗೆ ಕಾಯಿ ಹೂ ಹಾಕಿ ಇಳ್ಸಿರೆ ಬೆಳ್ಳರಿ ಪಲ್ಯ ತಯಾರ್.






# ಬಾಣ್ತೆ (ಬಾಣಂತಿ)

ಒಂದು ಹೆಣ್ಣ್‌ಗೆ ಚೊಚ್ಚಲ್ ಬಾಣಂತನಕೇಳ್ರೆ ಸುರುನ ಹೆರಿಗೆ ತವ್ರುದು ಮನೆಲೇ ಆಕುತೇಳ್ತ್ ವಾಡಿಕೆ. ಬಾಣಂತಿಗೆ ಹೆರಿಗೆ ಆದಂಗೆ ಕಾಡ್ ಮದ್ದ್ ಕೊಟ್ಟವೆ. ಬಾಣಂತಿಗೆ ಸುರೂಗೆ ಕಾಳ್‌ಮೆಣಸಿಗೆ, ನಂಜಿನ ಬೇರು ಕಷಾಯ ಕೊಟ್ಟವೆ. ಇದಾದ ಮೇಲೆ ಬಾಣಂತಿಗೆ 16 ದಿನ ಹುಳಿ ಮದ್ದ್ ಕೊಡ್ದು ಪದ್ಧತಿ. ಹೆಚ್ಚಾಗಿ ಕೊಡುವ ತಿಣಿ. ಗೋಧಿರೊಟ್ಟಿ(ಬ್ರೆಡ್) ಕೊಟ್ಟವೆ. ಇದಲ್ಲದೆ ಬಾಣ್ತೆಗೆ ಬಿಸಿ ಅನ್ನಕ್ಕೆ ಹಸ್‌ನ ತುಪ್ಪಲಿ ಜೀರುಳ್ಳಿನ ಒಳ್ಳೆ ಮೆಣ್‌ಸ್ ಹೊಡಿ ಹಾಕಿ ಹೊಸ್ದ್ ಕೊಟ್ಟವೆ. ಬಾಣ್ತೆಗೆ ಮಾಡುವ ಎಲ್ಲಾ ಅಡಿಗೆಗೂ ಒಳ್ಳೆಮೆಣ್ಸ್ ಹೊಡಿಹಾಕಿಯೇ ಮಾಡುವೆ ಹಂಗೇ ಅದರ್ಲಿ ನೀರ್‌ನ ಅಂಶ ಕಮ್ಮಿ ಇದ್ದದೆ ಇದ್ಕೆ ಹೇಳ್ತ್ ಹೊಸ್ದ್ ಕೊಡ್ತುತ. ಬಾಣ್ತೆ ಅರೈಕೆ ಆದ ಮೇಲೆ ಮೈ ಬಾಕಿ ಎಳ್‌ಮಂತ ಮಾಡಿಕೊಟ್ಟವೆ.




## ಕೂಸುನ ತೊಟ್ಲ್ :

ಕೂಸು ಹುಟ್ಟಿ 16 ದಿನಲಿ ಹಸ್‌ಗೂಸುಗೆ ಅನ್ನಕೊಟ್ಟ್ ತೊಟ್ಲ್‌ಗೆ ಹಾಕುದು. ಅರೆಬಾಸಿಕರ್‍ಲಿ ಒಂದು ಸಂಪ್ರದಾಯ. ಅಂದ್‌ನ ದಿನ ಕೂಸುನ ಎಣ್ಣೆ ಹಾಕಿ ಮಿೂಸಿ ಹೊಸಬಟ್ಟೆ ಹಾಕಿ ಸಿಂಗಾರ ಮಾಡಿ. ಸುರೂಗೆ ಕೂಸುನ ಬಾಯಿಗೆ ಅನ್ನಕೊಟ್ಟ್ ತೊಟ್ಲ್‌ಗೆ ಹಾಕ್‌ಕನ ಹೆಸ್‌ರ್ ಹಾಕುವೆ.



## ಹಾಲನ್ನ

ಕಾಸಿದ ಹಾಲ್‌ನ ಕೆನೆಗೆ ಮೆತ್ತಂಗೆ ಬೆಂದ ಅನ್ನನ ಸೇರ್‍ಸಿ ಲಾಯ್ಕ ಅರ್‍ದ್. ಕೂಸುನ ಬಾಯಿಗೆ ಚಿನ್ನಲಿ ಕೊಡುವ ಪದ್ದತಿಗೆ ಹಾಲನ್ನ ಕೊಡ್ದು ತೇಳ್ವೆ



# ಸಾವು ಸುದ್ದ ತಿತಿ (ತಿಥಿ)



ಅರೆಬಾಸಿಕರ್ಲ್ಲಿ ಸಂಪ್ರದಾಯದಂಗೆ ಸಾವು, ಸುದ್ದ, ತಿತಿನ ಶಾಸ್ತ್ರಬದ್ಧ ಆಗಿ ನಡುಸುವೆ. ಕುಟುಂಬಲಿ ಯಾರಾದರ್ ತೀರಿಕಂಡ್ರೆ ಅವರ ದಪನ ಆಗುವಲ್ಲಿ ಮುಟ್ಟ ಆ ಮನೆಲಿ ಯಾರೂ ಅಡಿಗೆ ಮಾಡಿಕೆ ಬೊತ್ತ್. ಅಂದ್‌ನ ದಿನ ಅವರ ನೆರೆಮನೆವು ಊಟದ ವ್ಯವಸ್ಥೆ ಮಾಡಕು. ಸಾವು ದಪನ ಆದ ಮೇಲೆ ಮನೆಲಿ ಚಪ್ಪೆ ಗಂಜಿ, ಕಾಯಿ ಬೊಜ್ಜಿ ಮಾಡಿ ತಿಂದವೆ.

## ಸುದ್ದ

ದಪನ ಆದಲ್ಲಿಂದ 3ನೇ ದಿನ ಶುದ್ಧ ಕಾರ್ಯ ಮಡ್ಕಂಡವೆ. ಅಂದ್ 3 ತರದ ಪಾಯಿಸ ತೇಳ್ರೆ: ಅಕ್ಕಿ ಪಾಯಿಸ, ರವೆ ಪಾಯಿಸ, ಕಡ್ಲೆಬೇಳೆ ಪಾಯಿಸ
ನೀರುಳ್ಳಿ ಪೊಕ್ಕಡ, ಮರ್ಕಿನ್ ಕಜಾಯ, ಬಾಳೆಕಾಯಿ ಕುಡು ಪಲ್ಯ, ಬೂದು ಕುಂಬಳ ಸಾರ್.

## ರವೆಪಾಯಸ

### ಬೇಕಾಗುವ ಸಾಮಾನ್‌ಗ

- ರವೆ
- ಸಕ್ಕರೆ
- ತುಪ್ಪ
- ದ್ರಾಕ್ಷಿ
- ಗೇರ್‌ಬೀಜ
- ಲವಂಗ
- ಪಟ್ಟೆ
- ಯಾಲಕ್ಕಿ



### ಮಾಡುವ ಕ್ರಮ

ರವೆನ ಹಙ ಹೊರ್ಕಂಡ್ ಕಾದ ನೀರ್‌ಗೆ ಹಾಕಿ ಲಾಯ್ಕ ತಿರ್‌ಗ್‌ಸಕು. ಬೇಯಕನ ಸಕ್ಕರೆ, ರುಚಿಗೆ ಉಪ್ಪು ಹಾಕಕು. ಹಸ್‌ನ ತುಪ್ಪಲಿ ಲವಂಗ ಪಟ್ಟೆ, ಯಾಲಕ್ಕಿ, ದ್ರಾಕ್ಷಿ, ಗೇರ್‌ಬೀಜನ ಕೆಂಪು ಹೊರ್ದ್ ಸೇರ್ಸಕು. ಗಮ ಗಮ ರವೆ ಪಾಯಸ ತಯಾರ್.

## ನೀರುಳ್ಳಿ ಪೊಕ್ಕಡ

### ಬೇಕಾಗುವ ಸಾಮಾನ್‌ಗ

- ಕಡ್ಲೆಹೊಡಿ
- ನೀರುಳ್ಳಿ
- ಕಾಯಿಮೆಣ್ಸ್
- ಸುಂಟಿ
- ಅಗ್ರಣೆ ಸೊಪ್ಪು
- ಸಂಬಾರ ಸೊಪ್ಪು
- ರುಚಿಗೆ ಉಪ್ಪು
- ನೀರ್
- ಹೊರಿಯಕೆ ಎಣ್ಣೆ



### ಮಾಡುವ ಕ್ರಮ

ಕಡ್ಲೆಹೊಡಿ ತುಂಡುಮಾಡ್ದ ನೀರುಳ್ಳಿ ಕಾಯಿಮೆಣ್ಸ್ ಶುಂಠಿ, ಸಂಬಾರಸೊಪ್ಪು, ಅಗ್ರಣೆಸೊಪ್ಪು ರುಚಿಗೆ ಉಪ್ಪು ಮಿಶ್ರಮಾಡಿ ನೀರ್ ಸೇರ್ಸಿ ಪೊಕ್ಕಡ ಹದಕ್ಕೆ ಕಲ್ಸಿ ಎಣ್ಣೆಲಿ ಹೊರಿಯಕು. ಇದೇ ನೀರುಳ್ಳಿ ಪೊಕ್ಕಡ.




## ಮರ್ಕಿನ್ ಕಜಾಯ

**ಬೇಕಾಗುವ ಸಾಮಾನ್‌ಗ**

ಮರ್ಕಿನ್
ಸಕ್ಕರೆ
ಉಪ್ಪು
ಎಣ್ಣೆ
ನೀರ್
ಸೋಡಾಹೊಡಿ

**ಮಾಡುವ ಕ್ರಮ**

ಮರ್ಕಿನ್‌ಗೆ ಸಕ್ಕರೆ ರುಚಿಗೆ ಉಪ್ಪು ಸೊಲ್ಪ ಬಿಸಿ ಎಣ್ಣೆ, ಸೋಡಾಹೊಡಿ, ನೀರ್ ಸೇರ್ಸಿ ಬಂದ ಮಾಡಿಕಣಕು. ಕಾದ ಎಣ್ಣೆಲಿ ಸಣ್ಣ ಸಣ್ಣ ಉಂಡೆ ಬುಡೊಕು. ಕಂದ್ ಬಣ್ಣ ಬಾಕೆ ಮುಟ್ಟ ಹೊರಿಯಕು. ಸುದ್ದಲಿ ಮಾಡುವ ಮರ್ಕಿನ ಕಜಾಯಕ್ಕೆ ಮೊಟ್ಟೆ ಹಾಕುದುಲ್ಲೆ.

## ಬೂದಿಕುಂಬಳ ಗೈಪು

**ಮಾಡುವ ಕ್ರಮ**

ಬೂದಿಕುಂಬಳ
ಕಾಯಿ
ಹಸಿಮೆಣ್ಸ್
ನೀರುಳ್ಳಿ
ಬೆಳ್ಳುಳ್ಳಿ

ಎಣ್ಣೆಗೆ ಸಾಸುವೆ ಬೆಳ್ಳುಳ್ಳಿ, ನೀರುಳ್ಳಿ, ಹಸಿಮೆಣ್ಸ್ ಒಡ್ದ್ ಹಾಕಿ ಬಾಡ್ಸಕು. ಅದ್ಕೆ ಬೂದಿಕುಂಬಳ ಹೋಳುಮಾಡಿ ಹಾಕಿ ಬಾಡ್ಸಕು ಅದ್ಕೆ ಹಞ ಅರ್‌ಶಣ, ಉಪ್ಪು, ಹಾಕಿ ಬೇಯಕನ ಮಸಾಲೆಗೆ ಕಾಯಿ, ಜೀರಿಗೆ ಹಾಕಿ ಕಡ್ಕಂಡ್ ಮಿಶ್ರಮಾಡಕು. ಲಾಯ್ಕ ಕೊದಿಯಕನ ಒಂದು ಚೂರು ಬೆಲ್ಲ ಹಾಕಿ ಇಳ್ಸಿರೆ ಬೂದುಕುಂಬಳ ಗೈಪು ತಯಾರಾದೆ.

## ಬಾಳೆಕಾಯಿ ಕುಡು ಪಲ್ಯ

**ಬೇಕಾಗುವ ಸಾಮಾನ್‌ಗ**

ಮರಬಾಳೆ ಕಾಯಿ
ಕುಡು
ನೀರ್
ಉಪ್ಪ್,
ಟೊಮೇಟ
ಕಾಯಿಮೆಣ್ಸ್

**ಮಾಡುವ ಕ್ರಮ**



ಕುಡುನ 6 ಗಂಟೆ ನೀರ್‌ಲಿ ಪದ್‌ನ್‌ಸಕು. ಪದ್‌ನದ ಕುಡುನ ಕುಕ್ಕರ್‌ಲಿ ಬೇಸಿಕಣಕು. ಬೆಂದ ಕುಡುನೊಟ್ಟಿಗೆ ಬಾಳೆಕಾಯಿನ ಹೋಳು ಹೋಳು ತುಂಡು ಮಾಡಿಕಂಡ್ ಅರ್‌ಶಣ, ಉಪ್ಪು ಕಾಯಿಮೆಣ್ಸ್ ಒಡ್ದ್ ಹಾಕಿ ಬೇಸಿಕಂಡ್ ನೀರ್ ಬಗ್ಗ್‌ಸಕು. ನೀರ್ ಆರ್ದ ಬಾಳೆಕಾಯಿ ಕುಡು ಮಿಶ್ರಣನ ಅಗ್ರಣೆಗೆ ಎಣ್ಣೆ ಮೊಡ್ಗಿ ಸಾಸುವೆ, ನೀರುಳ್ಳಿ, ಬೆಳ್ಳುಳ್ಳಿ ಅಗ್ರಣೆಸೊಪ್ಪು, ಜೀರಿಗೆ ಟೊಮೇಟ ಸೇರ್ಸಿ ಅಗ್ರಣೆಗೆ ಹಾಕಕು. ಕಾಯಿ ಹೆರ್ದ್ ಕಾಯಿ ಹೂ ಮಿಸ್ರಮಾಡ್ರೆ ಬಾಳೆಕಾಯಿ ಕುಡು ಪಲ್ಯ ತಯಾರ್.

ಹಂಗೇ ಅದರ ಬಗ್ಗ್‌ಸಿದ ನೀರ್‌ಗೆ ಬೇರೆ ಅಗ್ರಣೆ ಹಾಕಿ ಹುಣ್ಸುಳಿ ನೀರ್ ಹಾಕಿರೆ ಬಾಳೆಕಾಯಿ ಕುಡುನ ರಸ ಅನ್ನಕ್ಕೆ ರುಚಿ ಆದೆ.




ತೀರಿ ಹೋದಲ್ಲಿಂದ 11 ನೇ ದಿನದಂದ್ ತಿತಿ ಕಾರ್ಯ ಮಾಡುವೆ. ಅಂದ್ ಸತ್ತವುಕೆ ಕೋಳಿ ಕೂಂಗಿಕೆ ಮುಂದೆ ಎಡೆಹಾಕಿ ಹೊತಾರೆ ಮದ್ಯಾನ ಹಿಂಬೊತ್ತು 3 ಹೊತ್ತು ಊಟ ಇದ್ದದೆ. ಎಡೆ ಎಳ್ದ್ ಎಲ್ಲವುಕೂ ಗದ್ದಾಳ ಊಟ ಇದ್ದದೆ. ಈ ಸಂದರ್ಭ ಮುಖ್ಯ ಆಗಿ ಉದ್ದ ಕಡಬು (ಬೊಜ್ಜ ಕಡಬು) ಬಟ್ಲಿಟ್ಟ್ ಇಡ್ಲಿ ಹಂದಿಗೈಪು ಕೋಳಿಗೈಪು ಸೇರ್ದಂಗೆ ವಿಶೇಷ ಅಡಿಗೆ ಮಾಡಿ ಊಟ ಮಾಡುವೆ.

16ನೇ ದಿನದಂದ್ 16 ಕೊಲೆ ಕೂಡ್ಸುವ ಕ್ರಮ ಉಟ್ಟು. ಅಂದ್ ಐನ್‌ಮನೆ ಉಂಬೊಳೆಗೆಲಿ (ಊಟದ ಕೋಂಬರೆಲಿ) ಹಿರಿಯವು ಮನೆ ಜನ ಒಟ್ಟು ಸೇರಿ 16 ಕೊಲೆನೊಟ್ಟುಗೆ ಕೊಲೆ ಸೇರ್ಸುವೆ. ಆ ದಿನವೂ ಕಾರ್ಣಕ್ಕೆ ಇಸಿದಂಗೆ ಕ್ರಮ ಅನುಸರಿಸುವೆ.

ಸುರುನ ವರ್ಷ ದೀಪಾವಳಿ ಅಮವಾಸೆ ದಿನ ತೀರಿ ಹೋದ ಗಂಡ್ ಜನಕ್ಕೆ ಅವುಲು ಎಡೆ ಹಾಕುವೆ. ಮಾರ್ನೆ ದಿನ ತೀರಿ ಹೋದ ಹೆಣ್ಣ್ ಜನಕ್ಕೆ ಅವುಲು ಎಡೆ ಹಾಕುವೆ. ಈ ಸಂದರ್ಭ ಕೂಡ ಗದ್ದಾಳ ಅಡಿಗೆ ಮಾಡಿ ಊಟ ಮಾಡುವೆ.

## ಉದ್ದ ಕಡ್‌ಂಬು

### ಬೇಕಾಗುವ ಸಾಮಾನ್‌ಗ

ಅಕ್ಕಿತರಿ
ಉಪ್ಪ್
ನೀರ್



### ಮಾಡುವ ಕ್ರಮ

ಒಂದು ಅಳತೆ ತರಿಗೆ ಒಂದರ್ದ ಅಳತೆ ನೀರ್ ಹಾಕಿ ರುಚಿಗೆ ಉಪ್ಪ್ ಸೇರ್ಸಿ ಉಕ್ಕ್‌ರ್‌ಸಿಕಣೊಕು. ಬೆಂದ ಮೇಲೆ ಸಣ್ಣ ಸಣ್ಣ ಉದ್ದದ ಉಂಡೆ ಮಾಡಿ ಕಳಸಿಗೆಲಿ ಬೇಸಿರೆ ಉದ್ದ ಕಡಬು ತಯಾರ್.








# ಕೃಷಿ ಕಾರ್ಯಗ



ಕೊಡಗ್‌ನ ಅರೆಭಾಷಿಕರ್ ಮೂಲ ಕೃಷಿ ಆಗಿದ್, ಇವು ಕೃಷಿಕಾರ್ಯಕ್ಕೆ ತುಂಬಾ ಶ್ರಮ ವಹಿಸುವೆ. ಹಂಗೇ ಆಯಾ ಕೃಷಿ ಪದ್ಧತಿಲಿ ಸಮಗೆ ಸರಿಯಾಗಿ ಕೆಲ್ಸ ನಿರ್ವಹಿಸುವೆ. ಹಂಗೇ ಇವು ಬತ್ತದ ಕೃಷಿಲಿ ತುಂಬಾ ಆಸಕ್ತರಾಗಿರದ್‌ರ್‌ಂದ ಅಗೆ, ನಾಟಿ ಮತ್ತೆ ಬೆಳೆ ಕೆಲ್ಸನ ತುಂಬಾ ಗೌಜಲಿ ನಡ್ಸುವೆ. ಅಗೆನಾಟಿ ಕೆಲ್ಸ ಮಳೆಗಾಲಲಿ ಬಾದ್ದರ್‌ಂದ ಆಗ ಅವು ಕೂಡಾಡಿ ಕೆಲ್ಸ ಮಾಡುವೆ. ಈ ಸಂದರ್ಭ ಅವು ಗೌಜಿ ಗದ್ದಾಳಲಿ ಊಟನೂ ಮಾಡುವೆ. ಅಗೆ ನಾಟಿಗಲ್ಲ ಮಾಡುವ ವಿಸೇಸ ಅಡಿಗೆಗ
ಹಂದಿಗೈಪು, ಕೋಳಿಗೈಪು, ಕುಚ್ಚಲನ್ನ, ಅಕ್ಕಿರೊಟ್ಟಿ, ಕಡಂಬಿಟ್ಟ್, ಉಬ್ಬಾಕ್‌ಕಾಳ್ ಗೆಂಡೆ ಸಾರ್, ಮೊಟ್ಟೆ ಸಾರ್.

ಬೆಳೆ ಕೆಲ್ಸ, ಸುಮಾರಾಗಿ ಡಿಸೆಂಬರ್ ಜನವರಿ ತಿಂಗಳ್ಲ ಬಂದದೆ. ಈ ಕಾರ್ಯಕ್ಕೂ ಅರೆಭಾಷಿಕರ್ ಕೂಡಾಡಿಯೇ ಕೆಲ್ಸ ಮಾಡುವೆ. ಈ ಸಂದರ್ಭ ಕಡಂಬಿಟ್ಟ್, ಕೆಸನ ಗೆಂಡೆ ಕಾಕ್‌ಸಾರ್, ಕೈಮೀನ್ ಗೆಂಡೆ ಸಾರ್, ಕ್ಯಾನೆಗೆಂಡೆ ಸಾರ್

## ಹಲ್ಸ್‌ನಕ್ಕಿ ಪೊಜ್ಜಿ

### ಬೇಕಾಗುವ ಸಾಮಾನ್‌ಗ

ಒಣ್‌ಗಿದ ಹಲ್ಸ್‌ನ ಬೀಜ
ಕಾಯಿ
ಸಣ್ಣಮೆಣ್ಸ್
ಉಪ್ಪ್
ನಿಂಬುಳಿ
ಚೂರು ಬೆಲ್ಲ

### ಮಾಡುವ ಕ್ರಮ

ಹಲ್ಸ್‌ನ ಬೀಜನ ಮೊಣ್ಣ್‌ನ ಚೆಟ್ಟಿಲಿ ನಿದಾನ ಕೆಂಡಲಿ ಹೊರಿಯಕು. ಬೀಜ ಒಂದೊಂದಾಗಿ ಹೊಟ್ಟ್‌ಕನ ಬೇತ್‌ತೇಳಿ ಗೊತ್ತಾದೆ. ಮತ್ತೆ ಬೀಜ ತಣ್ಣಂಗಾದ ಮೇಲೆ ಅದರ ತೊಪ್ಪೆ ತೆಗ್ದ್ ಅರ್‌ಶ್‌ಣ ಹಾಕಿ ಸ್ವಲ್ಪ ತರಿಯಾಗಿ ಕಡ್ಕಣಕು. ಹಇ ಬೆಲ್ಲ ನೀರುಳ್ಳಿ ಹಾಕಿ ಪುನ ಮಿಸ್ರ ಮಾಡಿಕಣಕು. ಈಗ ಅಗ್ರಣೆಗೆ ಎಣ್ಣೆ ಮೊಡ್ಗಿ ಸಾಸುವೆ ಒಣ್‌ಗಿದ ಮೆಣ್ಸ್ ನೀರುಳ್ಳಿ ಹಾಕಿ ಬಾಡ್ಸಿಕಂಡ್ ಕಡ್ಕಂಡ ಪೊಜ್ಜಿನ ಹಾಕಿ ತಿರ್‌ಗ್‌ಸಕು ಕೊದ್ದ್ ಇಳ್ಸ್‌ಕನ ನಿಂಬುಳಿ ಹಿಂಡಕು. ಈ ಪೊಜ್ಜಿ ಅಕ್ಕಿ ರೊಟ್ಟಿ ಬಾರೀ ಲಾಯ್ಕಾದೆ. ವಿಶೇಸ ಆಗಿ ಹೂಡುಗನ ಗದ್ದೆಗೆ ಹಲ್ಸ್‌ನಕ್ಕಿ ಪೊಜ್ಜಿ, ರೊಟ್ಟಿ ಬುತ್ತಿ ತಕಂಡ್ ಹೋತಿದ್ದೊ.

## ಅಕ್ಕಿ ರೊಟ್ಟಿ

### ಬೇಕಾಗುವ ಸಾಮಾನ್‌ಗ

ಅನ್ನ
ಅಕ್ಕಿಹೊಡಿ
ಉಪ್ಪ್

### ಮಾಡುವ ಕ್ರಮ

ಅನ್ನ, ಅಕ್ಕಿಹೊಡಿ, ಉಪ್ಪ್‌ನ ಹಾಕಿ ಲಾಯ್ಕ ಕಲ್ಸಿ ಒಂದೊಂದೇ ಉಂಡೆ ಮಾಡಿ ಬಾಳೆ ಎಲೆ ಮೇಲೆ ಇಟ್ಟ್ ಕೈಲಿ ತಟ್ಟಿ ವೋಡಿಗೆ ಹಾಕಿ ಎರಡು ಬದಿ ಕಾದ ಮೇಲೆ ಕೆಂಡಲಿ ಹಾಕಿ ಪೊಕ್ಕಳ ಬಂದ ಮೇಲೆ ತೆಗಿಯಕು.




## ಮೊಟ್ಟೆ ಸಾರ್

**ಬೇಕಾಗುವ ಸಾಮಾನ್‌ಗ**

ಕೋಳಿಮೊಟ್ಟೆ

ಕಾಯಿ ಮಸಾಲೆ

**ಮಾಡುವ ಕ್ರಮ**

ಕೋಳಿ ಮೊಟ್ಟೆನ ನೀರ್‌ಗೆ ಹಿಡಿ ಉಪ್ಪು ಹಾಕಿ ಲಾಯ್ಕ ಬೇಸಿಕಣಕು. ಅಗ್ರಣೆಗೆ ಎಣ್ಣೆ ಮೊಡ್ಗಿ ಎಣ್ಣೆಲಿ ಸಾಸುವೆ ಹೊಟ್ಟ್‌ಕನ ಅಗ್ರಣೆ ಸೊಪ್ಪು, ಬೆಳ್ಳುಳ್ಳಿ, ನೀರುಳ್ಳಿ ಟೊಮೇಟ ಹಾಕಿ ಬಾಡ್‌ಕನ ತೆಂಗಿನಕಾಯಿ ಮಸಾಲೆ ಸೇರ್‌ಸಿ ಕೊದ್‌ಸಕು. ಕೊದಿಯಕನ ಬೆಂದ ಮೊಟ್ಟೆ ಹಾಕಿ ರುಚಿಗೆ ಕಾಸುಳಿ ಸೇರ್‌ಸಿ ಇಳ್ಸಿರೆ ಮೊಟ್ಟೆ ಸಾರ್ ತಯಾರ್.

ಮಸಾಲೆ ಕೊದಿಯಕನ ಮೊಟ್ಟೆನ ಹೊಯ್ದ್ ಕೂಡ ಮೊಟ್ಟೆ ಸಾರ್ ಮಾಡಕ್.



## ಸೋಂತೆಕಾಯಿ ಹಲ್ಸ್‌ನಕ್ಕಿ ಸಾರ್

**ಬೇಕಾಗುವ ಸಾಮಾನ್‌ಗ**

ಹಣ್ಣ್ ಸೋಂತೆ

ಹಲ್ಸ್‌ನಹಣ್ಣ್‌ನ ಬೀಜ

ಕಾಯಿ

ಮಸಾಲೆಗೆ ಬೇಕಾದ ಸಾಮಾನ್‌ಗ



**ಮಾಡುವ ಕ್ರಮ**

ಸೋಂತೆಕಾಯಿನ ತೊಪ್ಪೆ, ತಿರ್‌ಳ್ ತೆಗ್ದ್ ಹೋಳು ಮಾಡಿಕಣಕು, ಹಲ್ಸ್‌ನಕ್ಕಿನ ಸೊಲ್ಪ ಗುದ್ದಿ ಅದರ ತೊಪ್ಪೆ ತೆಗ್ದ್ ಕಡಕಲ್ಲ್‌ಲಿ ಹಾಕಂಡ್ ಅದರ ಕೆಂಪು ತೊಪ್ಪೆನ ಸನ ತೆಗಿಯಕು. ಮತ್ತೆ ನೀರ್ ಸೇರ್‌ಸಿ ಬೇಸಕು. ಸುಮಾರಾಗಿ ಬೇಯಕನ ಸೋಂತೆಕಾಯಿನ ಸೇರ್‌ಸಿ ಉಪ್ಪು ಕಾರ ಅರ್‌ಶಿಣ ಹಾಕಿ ಬೇಸಕು. ಕಡೇಗೆ ಕಾಯಿ ಮಸಾಲೆ ಸೇರ್‌ಸಿ ಕೊದ್ಸಿ ಇಳ್ಸಕು. ಮತ್ತೆ ಅದ್ಕೆ ಸಾಸುವೆ ಬೆಳ್ಳುಳ್ಳಿ ಅಗ್ರಣೆ ಕೊಟ್ರೆ ಸೋಂತೆಕಾಯಿ ಹಲ್ಸ್‌ನಕ್ಕಿ ಸಾರ್ ತಯಾರ್. ಈ ಸಾರ್‌ನ ರೊಟ್ಟಿ, ಹಿಟ್ಟ್, ಅನ್ನ ಯಾವುದಕ್ಕೆ ಬೇಕಾದರೂ ತಿನ್ನಕ್ಕೆ.



# ಬೆಳೆ ಕೆಲ್ಸ

## ಕೆಸನ ಗಂಡೆ ಕಾಳ್ ಸಾರ್

### ಬೇಕಾಗುವ ಸಾಮಾನ್‌ಗ

ಕೆಸನ ಗಂಡೆ
ಹಣ್ಣ್‌ಕಾಳ್
ಕಾಯಿ
ಮಸಾಲೆಗೆ ಬೇಕಾದ ಸಾಮಾನ್‌ಗ

### ಮಾಡುವ ಕ್ರಮ

ಕೆಸನ ಗಂಡೆನ ಕೀಸಿ ಹೋಳು ಮಾಡಿಕಣಕು. ಹಣ್ಣ್ ಕಾಳ್‌ನ ನೀರ್‌ಲಿ ಹಾಕಿ ಉಪ್ಪ್ ಕಾರ ಹಾಕಿ ಅರ್ದ ಬೇಯಕನ ಕ್ಯಾನೆಗೆಂಡೆ ಹಾಕಿ ಬೆಂದ ಮೇಲೆ ಕಾಯಿ ಕಡ್ದ್ ಮಸಾಲೆ ಹಾಕಿ ಮೇಲೆಂದ ಬೆಳ್ಳುಳ್ಳಿ ಅಗ್ರಣೆ ಹಾಕಕು. ಈಗ ಕೆಸನಗೆಂಡೆ ಗೈಪು ತಯಾರ್.

## ಇಲಾತ್‌ಗೆಂಡೆ ಒಣ್‌ಗಿಲ್ ಮೀನ್ ಗೈಪು.



### ಬೇಕಾಗುವ ಸಾಮಾನ್‌ಗ

ಇಲಾತ್‌ಗೆಂಡೆ– 1 ಕೆ.ಜಿ
ಹಸಿಕಾಳ್– · ಕೆ.ಜಿ
ಒಣ್‌ಗಿಲ್ ಮೀನ್– ½ ಕೆ.ಜಿ (ಚಿರಾವ್ ಮೀನ್)
ಮೆಣ್‌ಸ್ ಹೊಡಿ– 2 ಚಮಚ
ಸಂಬಾರ ಹೊಡಿ– 2 ಚಮಚ
ಕಾಯಿ– ½ ಗಡಿ
ಅರ್‌ಸಣ ಹೊಡಿ– 1 ಟೀ ಚಮ್‌ಚ
ಈರುಳಿ – 1
ಹುಳಿನೀರ್ – ರುಚಿಗೆ
ಬೆಳ್ಳುಳಿ– 1 ಗೆಂಡೆ.

### ಮಾಡುವ ಕ್ರಮ

ಚಟ್ಟಿಲಿ ಕಾಳ್ ಮತ್ತೆ ಗೆಂಡೆನ ಅಗ್ಗರಣೆ ಹಾಕಿ ಬೇಯಿಸೊಕು. ಅದ್‌ಕೆ ಒಣಗಿಲ್ ಮೀನ್ ಹಾಕೊಕು. ಲಾಯ್ಕ ಬೆಂದ ಮ್ಯಾಲೆ ಇದ್‌ಕ್ಕೆ ಮೇಲೆ ಹೇಳ್ದ ವಸ್ತುಗಳ್‌ನ ಮಸಾಲೆ ಮಾಡಿ, ಬೆಂದ ಕಾಳ್ ಮತ್ತೆ ಗೆಂಡೆಗೆ ಹಾಕಿ ಲಾಯ್‌ಕ ಕೊದುಸಕು. ಮತ್ತೆ ಸ್ವಲ್ಪ ಹುಳಿನೀರ್ ಹಾಕಿ ಇಳ್‌ಸೊಕು. ಇಳ್‌ಸಿದ ಮೇಲೆ ಬೆಳ್ಳುಳಿ, ಒಣಗಿಲ್ ಮೆಣ್‌ಸ್ ಹಾಕಿ ಅಗ್ಗರಣೆ ಕೊಟ್ಟರೆ ಬೆಳೆ ಕೆಲ್‌ಸಲಿ ಮಾಡುವ ಮೀನ್ ಗೈಪು ರೆಡಿ ಆದೆ. ಇದ್‌ಕ್ಕೆ ಕಡುಂಬು ಒಳ್ಳ ಕಾಂಬಿನೇಷನ್. ಹಿಂದೆನವು ಕಾಳ್‌ಗೆಂಡೆ ಗೈಪು ಕಡ್‌ಂಬಿಟ್ಟ್ ಹೇಳಿ ಮಾಡ್ಸಿದ ಜೋಡಿತ ಹೇಳ್ಯೊಲೊ.

## ಕ್ಯಾನಗೆಂಡೆ ಗೈಪು

### ಬೇಕಾಗುವ ಸಾಮಾನ್‌ಗ

ಕ್ಯಾನ ಗೆಂಡೆ
ಹಣ್ಣ್‌ಕಾಳ್
ಕಾಯಿ
ಮಸಾಲೆಗೆ ಬೇಕದ ಸಾಮಾನ್‌ಗ

ಕ್ಯಾನ ಗೆಂಡೆನ ಕೀಸಿ ಹೋಳು ಮಾಡಿಕಣಕು. ಹಣ್ಣ್ ಕಾಳ್‌ನ ನೀರ್‌ಲಿ ಹಾಕಿ ಉಪ್ಪ್ ಕಾರ ಹಾಕಿ ಅರ್ದ ಬೇಯಕನ ಕ್ಯಾನೆಗೆಂಡೆ ಹಾಕಿ ಬೆಂದ ಮೇಲೆ ಕಾಯಿ ಕಡ್ದ್ ಮಸಾಲೆ ಹಾಕಿ ಮೇಲೆಂದ ಬೆಳ್ಳುಳ್ಳಿ ಅಗ್ರಣೆ ಹಾಕಕು. ಈಗ ಕ್ಯಾನಗೆಂಡೆ ಗೈಪು ತಯಾರ್

# ನೆಂಟ್ರ್ ಮರ್ಯಾದಿ






ಅರೆಭಾಷೆಲಿ ಮನೆಗೆ ನೆಂಟ್ರ್ ಬಂದಂಗೆ ಚೊಂಬುಲಿ ನೀರ್ ತಟ್ಟೆಲಿ ಎಲೆಡಿಕೆ ಕೊಟ್ಟ್, ಕಾಲ್ ಮುಟ್ಟಿ ನಮಸ್ಕಾರ ಮಾಡಿ ಅವರ ಉಪಚಾರ ಮಾಡುವೆ. ಅರೆಭಾಷೆಲಿ ಇದ್ಕೆ ಕಾಲ್ ಹಿಡಿಯುದು ಹೇಳ್ತೆ.

ಮನೆಗೆ ನೆಂಟ್ರ್ ಬಂದರೆ ಸುರೂಗೆ ಕಾಪಿ, ತಿಂಡಿ ಕೊಡ್ವ ಪದ್ಧತಿ. ಹಿಂದೆನ ಕಾಲಲಿ ನೆಂಟ್ರಿಗೆ ವಿಶೇಷ ಆಗಿ ಕೊಡುವ ತಿಂಡಿ ತಿನಿಸ್, ಅವ್ಲಕ್ಕಿ ಕಲ್ಸಿದ್, ರೊಟ್ಟಿ ಬೇಸಿದ್, ಮೊಟ್ಟೆ ಕಜಾಯ (ಮರ್ಕೆಗ್ ಕಜಾಯ) ಮುಖ್ಯ ಆಗಿದ್ದನೆ. ಅವ್ವುಳ್ಳಂಗೆ ಅವರವರ ಶಕ್ತ್ಯಾನುಸಾರ ಬೇಕಾದ ಅಡಿಗೆ ಮಾಡಿ ಇಕ್ಕುದೆ.

ಆಗ ಮನೆಲಿ ಒಳ್ಳೆ ನೆಂಟ್ರುಗೆ ನಾಡ್ ಕೋಳಿ ಕೊಂದ್ ಗದ್ದಳ ಮಾಡ್ತಿದ್ದೊ. ಅಂದೇ ಹೋಗನ್ನ ಮೊಟ್ಟೆ ಸಾರ್ ಮಾಡಿ ಇಕ್ಕ್ತಿದ್ದೊ.

## ಕಾರ ಅವ್‌ಲಕ್ಕಿ

### ಬೇಕಾಗುವ ಸಾಮಾನ್‌ಗ

ಅವಲಕ್ಕಿ– 1 ಕೆ.ಜಿ
ಹಸಿಮೆಣ್‌ಸ್– 15–20
ಈರುಳ್ಳಿ– ½ ಕೆ.ಜಿ
ಉಪ್ಪು– ರುಚಿಗೆ ಬೇಕಾಗುವಷ್ಟ್
ಕಾಯಿ ಹೆರ್‌ದದ್– 2 ಕಾಯಿ
ಸಂಬಾರಸೊಪ್ಪು
ಸಕ್ಕರೆ– ಸ್ವಲ್ಪ

### ಮಾಡುವ ಕ್ರಮ

ಅವಲಕ್ಕಿನ ಸ್ವಲ್ಪ ನೀರ್ ಹಾಕಿ ಕಲ್‌ಸಕು. ಅದ್‌ಕ್ಕೆ ನೀರುಳಿ, ಸಂಬಾರ ಸೊಪ್ಪು, ಹಸಿಮೆಣ್‌ಸ್ ಸಣ್ಣ ಕೊಯ್ದ್ ಹಾಕೊಕು. ರುಚಿಗೆ ಸ್ವಲ್ಪ ಉಪ್ಪು ಮತ್ತೆ ಸಕ್ಕರೆ ಹಾಕೊಕು. ಈಗ ಕಾಯಿ ಹೆರ್ದ್ ಅದ್‌ಕೆ ಹಾಕಿ ಕಲ್ಸೊಕು. ಈಗ ನೀವು ಹುತ್ತರಿಲಿ ಮಾಡುವ ಖಾರ ಅವಲಕ್ಕಿ ರೆಡಿ.



## ಅಪ್ಪದಿಟ್ಟ್

### ಬೇಕಾಗುವ ಸಾಮಾನ್‌ಗ

ಬೆಳ್‌ತಕ್ಕಿ – ½ ಕೆ.ಜಿ.
ತೆಂಗಿನ ಕಾಯಿ – ½ ಗಡಿ
ಉಪ್ಪು – ರುಚಿಗೆ
ಏಲಕ್ಕಿ – ಸ್ವಲ್ಪ
ಎಣ್ಣೆ – 1 ಲೀಟರ್



### ಮಾಡುವ ಕ್ರಮ

ಎಣ್ಣೆ ಬಿಟ್ಟ್ ಉಳಿದ ಎಲ್ಲಾ ಸಾಮಾನ್‌ಗಳ್ನ ರುಬ್ಬೊಕು(ಮಿಕ್ಸಿಲಿ). ಮತ್ತೆ ಎಣ್ಣೆ ಕಾದ ಮ್ಯಾಲೆ ಬಂದನ(ಹಿಟ್ಟ್) ಹೊಯ್ಯಕು.




## ಅನ್ನದ ಕಡ್ಂಬು

**ಬೇಕಾಗುವ ಸಾಮಾನ್‌ಗ**

ಬೇಸಿದ ಅನ್ನ
ಉಪ್ಪ್
ಅಕ್ಕಿ ತರಿ (ಹೊಡಿ)



**ಮಾಡುವ ಕ್ರಮ**

ಅನ್ನಕ್ಕೆ ಉಪ್ಪು, ಅಕ್ಕಿ ಹೊಡಿ ಹಾಕಿ ಲಾಯ್ಕ ಬಂದ ಕಲ್ಸಿ ಹಇ ಗಟ್ಟಿ ಕಲ್ಸಿಕಂಡ್ ಒಂದೊಂದೇ ಉಂಡೆ ಮಾಡಿ ಕಳ್ಸಿಗೆಲಿಟ್ಟ್ 10 ನಿಮಿಷ ಬೇಯಿಸೊಕು.

## ಅನ್ನದ ಬಟ್ಲ್ಇಟ್ಟ್

**ಬೇಕಾಗುವ ಸಾಮಾನ್‌ಗ**

ಅಕ್ಕಿ
ಉದ್ದ್
ಮೆಂತೆ
ಉಪ್ಪ್
ಸೋಡಾ
ಅನ್ನ



**ಮಾಡುವ ಕ್ರಮ**

2 ಗಂಟೆಗೆ ಮುಂದೆ ನೆನ್‌ಸಿದ ಅಕ್ಕಿ, ಉದ್ದು, ಮೆಂತೆ ಅನ್ನನ ಲಾಯ್ಕ ಮಿಕ್ಸಲಿ ಆಡಿಸಿ(ಅರ್ದ್) ತೆಗ್‌ದ್ ಉಪ್ಪು ಹಾಕಿ ಕಲ್‌ಸಿ 1 ಪಾತ್ರೆಗೆ ಹಾಕಿ ಬಟ್ಲಂದ ಮುಚ್ಚಿ ಬಟ್ಟೆಂದ ಬಾಯಿಕಟ್ಟಿ ವಾರ್ನೆ ದಿನ ತೆಗ್ದ್ ಅದ್ಕೆ ಸೋಡಾಹೊಡಿ(ಅಡಿಗೆ) ಹಾಕಿ ಲಾಯ್ಕ ತಿರ್‌ಗ್‌ಸಿ 5 ನಿಮಿಷ ಬುಟ್ಟ್ ಬಟ್ಟ್ಲ್‌ಗೆ ಹಾಕಿ ಕಳ್‌ಸಿಗೆಲ್ ಬೇಸಿ ತೆಗ್ದ್

## ಅನ್ನದ ಶ್ಯಾಮಿಗೆ

**ಬೇಕಾಗುವ ಸಾಮಾನ್‌ಗ**

ಅಕ್ಕಿ – ½ ಕೆ.ಜಿ
ನೀರ್
ಉಪ್ಪ್

**ಮಾಡುವ ಕ್ರಮ**

1 ½ ಕಪ್ ನೀರ್ ಕೊದಿಬಂದ ಮೇಲೆ ½ ಕೆ.ಜಿ ಅಕ್ಕಿನ ಹಾಕಿ, ರುಚಿಗೆ ತಕ್ಕಷ್ಟ್ ಉಪ್ಪ್ ಹಾಕಿ ಅದ್ ಲಾಯ್ಕ ಬೆಂದ್ ಇಂಗಿದ ಮೇಲೆ ಬಿಸಿ ಬಿಸಿಯಾಗಿ ನೂಪಿಟ್ಟ್ ವರಲಿಗೆ ಹಾಕಿ ಒತ್ತೊಕು. ಒತ್ತ್‌ಕನ ಬಾಳೆ ಕೈರಟ್ಟೆಲಿ ಹಾಕಿರೆ ರುಚಿ ಜಾಸ್ತಿ.

## ಅನ್ನದ ಚಕ್ಕುಲಿ

**ಬೇಕಾಗುವ ಸಾಮಾನ್‌ಗ**

ಅನ್ನ
ಉಪ್ಪ್,
ಅಕ್ಕಿಹುಡಿ
ಅರಿಶಿಣ
ಜೀರಿಗೆ
ಎಣ್ಣೆ

**ಮಾಡುವ ಕ್ರಮ**



ಅನ್ನ, ಉಪ್ಪು, ಅಕ್ಕಿಹುಡಿ, ಅರಿಶಿಣ, ಜೀರಿಗೆ 2 ಸ್ಪೂನ್ ಎಣ್ಣೆ ಹಾಕಿ ಲಾಯ್ಕ ಕಲಸಿ (ಗಟ್ಟಿ) ಚಕ್ಕುಲಿ ವರಳಿಗೆ ಹಾಕಿ ಎಣ್ಣೆಲಿ ಹೊರಿಯಕು




## ಅನ್ನದ ಕಾರ್ಸವೆ

ಬೇಕಾಗುವ ಸಾಮಾನ್‌ಗ

ಅನ್ನ
ಉಪ್ಪ್
ಎಳ್ಳ್
ಅರಿಶಿಣ
ಅಕ್ಕಿಹುಡಿ
ಎಣ್ಣೆ



ಮಾಡುವ ಕ್ರಮ

ಅನ್ನ, ಉಪ್ಪು, ಅರಿಶಿಣ, ಅಕ್ಕಿಹೊಡಿನ ಚೆನ್ನಾಗಿ ಕಲಸಿ(ಚಪಾತಿ ಹಿಟ್ಟಿನ ಹದಕ್ಕೆ) ಕೊನೆಗೆ ಎಳ್ಳ್ ಹಾಕಿ ಸ್ವಲ್ಪ ಎಣ್ಣೆ (ಕಾದ) ಹಾಕಿ ಉಂಡೆ ಮಾಡಿ. ಕಾರ್ಸವೆ ಮಾಡುವ ವರಲಿಗೆ ಹಾಕಿ ಒತ್ತಿ ಎಣ್ಣೆಲಿ ಹೊರ್ದ್ ತೆಗೆಯಕು.

## ಅನ್ನದ ಕೇಸರಿಬಾತ್

ಬೇಕಾಗುವ ಸಾಮಾನ್‌ಗ

| | |
|---|---|
| ಅನ್ನ | ಗೇರ್‌ಬೀಜ |
| ತುಪ್ಪ | ಲವಂಗ |
| ಸಕ್ಕರೆ | ಪಟ್ಟೆ |
| ದ್ರಾಕ್ಷಿ | ಯಾಲಕ್ಕಿ |
| | ಬಣ್ಣ |

ಮಾಡುವ ಕ್ರಮ

ಬಾಂಡ್ಲಿಲಿ ತುಪ್ಪ ಕಾಸಿ ಲವಂಗ, ಪಟ್ಟೆ, ದ್ರಾಕ್ಷಿ ಗೇರ್‌ಬೀಜನ ಹಾಕಿ ಕೆಂಪಾದ ಮೇಲೆ ಬಣ್ಣ ಸೇರ್ಸಿ ಅನ್ನನ ಹಾಕಿ ಲಾಯ್ಕ ತಿರ್‌ಗ್‌ಸಕು. ಅದ್ಕೆ ಬೇಕಾದಷ್ಟ್ ಸಕ್ಕರೆ ಹಾಕಿ ಯಾಲಕ್ಕಿ ಹೊಡಿಮಾಡಿ ಸೇರ್ಸಿಕಂಡ್ ಲಾಯ್ಕ ಮೊಗ್‌ಚಿ ಇಳ್ಸಿರೆ ಅನ್ನದ ಕೇಸರಿಬಾತ್ ತಯಾರ್.

## ಅಕ್ಕಿ ನುಚ್ಚಿನ ಪಾಪಿಟ್ಟ್

ಬೇಕಾಗುವ ಸಾಮಾನ್‌ಗ

ಅಕ್ಕಿ
ನುಚ್ಚು
ನೀರ್
ಉಪ್ಪ್



ಮಾಡುವ ಕ್ರಮ

1 ಕಪ್ ಅಕ್ಕಿ ನುಚ್ಚಿಗೆ 2 ಕಪ್ ನೀರ್ ಹಾಕಿ ಉಪ್ಪು ಹಾಕಿ ಅದರ್‌ನ ಬಟ್ಟ್‌ಲಿಗೆ ಹಾಕಿ ಕಳಸಿಗೆಲಿಟ್ಟ್ 15 ನಿಮಿಷ ಆದ ಮೇಲೆ ತೆಗ್ದ್ ತುಂಡು ಮಾಡೊಕು.

## ಅಕ್ಕಿ ನುಚ್ಚಿನ ಮುದ್ದೆಹಿಟ್ಟ್

ಬೇಕಾಗುವ ಸಾಮಾನ್‌ಗ

ಅಕ್ಕಿ
ನುಚ್ಚಿ
ಉಪ್ಪ್
ನೀರ್.



ಮಾಡುವ ಕ್ರಮ

2 ಕಪ್‌ನಷ್ಟು ನೀರ್‌ನ ಒಂದು ಪಾತ್ರೆಗೆ ಹಾಕಿ ಕೊದಿಬಂದ ಮ್ಯಾಲೆ ಉಪ್ಪು, ನುಚ್ಚು 1 ಕಪ್ ಹಾಕಿ ಇಂಗಿಸಿ ಗಟ್ಟಿಯಾದ ಮೇಲೆ ಮುದ್ದೆ ಮಾಡೊಕು.




## ಅಕ್ಕಿ ಹಪ್ಪಳ



**ಬೇಕಾಗುವ ಸಾಮಾನ್ಗ**

ಅಕ್ಕಿ
ಉಪ್ಪ್
ಬಾಳೆಎಲೆ
ಜೀರಿಗೆ

**ಮಾಡುವ ಕ್ರಮ**

4–5 ಗಂಟೆ ನೆನ್ಸಿದ ಅಕ್ಕಿನ ತೆಗ್ದ್ ರುಚಿಗೆ ಉಪ್ಪು ಹಾಕಿ ತೆಳುವಾಗಿ ನೀರುದೋಸೆಗಿಂತ ಸ್ವಲ್ಪ ಗಟ್ಟಿಯಾಗಿ ಆಡ್ಸಿ ಸ್ವಲ್ಪ ಜೀರಿಗೆ ಹಾಕಿ, ಇನ್ನೊಂದು ಪಾತ್ರೆಗೆ ನೀರ್ ಹಾಕಿ ಅದರ ಮೇಲೆ ಬಿಳಿ ಬಟ್ಟೆ ಕಟ್ಟಿ ಇಟ್ಟ್ ಬಾಳೆಲೆಲ್ಲಿ ಒಂದೊಂದು ಚಮಚದಷ್ಟ್ ಹಿಟ್ಟ್‌ನ ಹಾಕಿ( ದೋಸೆನ ಹಂಗೆ) ಬಾಳೆಲೆನ ಆ ಬಟ್ಟೆಯಮೇಲೆ ಇಟ್ಟ್ ಅದು ಎದ್ದ್ ಬರುವಹಂಗೆ ಆಕನ ಮೊರಲಿ ಹಾಕಿ ಬಿಸಿಲ್‌ಲಿ ಒಣ್‌ಗಿಸಿ ಹೊರಿಯೊಕು(ಎಣ್ಣೆಲಿ).

## ಅಕ್ಕಿ ನುಚ್ಚಿನ ಉಪ್ಪಿಟ್



**ಬೇಕಾಗುವ ಸಾಮಾನ್ಗ**

ಅಕ್ಕಿನುಚ್ಚಿ
ಉಪ್ಪ್
ನೀರುಳ್ಳಿ
ಒಗ್ಗರಣೆ ಸೊಪ್ಪು
ಹಸಿಮೆಣ್ಸ್
ಎಣ್ಣೆ
ಸಾಸಿವೆ

**ಮಾಡುವ ಕ್ರಮ**

1 ಪಾತ್ರೆಗೆ ಎಣ್ಣೆ ಹಾಕಿ ಕಾದ ಮೇಲೆ ಸಾಸಿವೆ ಒಗ್ಗರಣೆ ಸೊಪ್ಪು ನೀರುಳ್ಳಿ ಹಸಿಮೆಣ್ಸ್ ಹಾಕಿ ಕಂದ್ ಬಣ್ಣ ಬಂದ ಮ್ಯಾಲೆ 1ಕ್ಕೆ 2 ಕಪ್ ನೀರಾಕಿ ಉಪ್ಪ್(ರುಚಿಗೆ) ಹಾಕಿ ಕೊದಿ ಬಂದ ಮೇಲೆ ಅಕ್ಕಿ ನುಚ್ಚಿ ಹಾಕಿ ಬೆಂದ ಮೇಲೆ ಇಳಿಸಿ.

## ವೋಡ್‌ದೋಸೆ

**ಬೇಕಾಗುವ ಸಾಮಾನ್ಗ**

ಅಕ್ಕಿ
ಅನ್ನ
ಉಪ್ಪ್

**ಮಾಡುವ ಕ್ರಮ**

1 ಗಂಟೆಗೆ ಮುಂದೆ ಅಕ್ಕಿ ನೆನೆ ಹಾಕಿ ಮತ್ತೆ ಅಕ್ಕಿಗೆ ಅನ್ನ,ಉಪ್ಪು ನೀರ್ ಸ್ವಲ್ಪ ಹಾಕಿ ಗಟ್ಟಿಯಾಗಿ ತೆಳ್ಳಗೆ ಕಲ್ಲ್‌ಲಿ ಆಡ್ಸಿ ತೆಗ್‌ದ್ ಎಣ್ಣೆ ಹಾಕದೆ ಮಣ್ಣ್‌ನ ವೋಡ್‌ಲಿ ಸ್ವಲ್ಪ(ದಪ್ಪ) ಹಾಕಿ ವೋಡ್‌ದೋಸೆ ಮಾಡೊಕು.

## ಅಪ್ಪದಿಟ್ಟು

**ಬೇಕಾಗುವ ಸಾಮಾನ್ಗ**

ಅಕ್ಕಿ
ಉಪ್ಪು
ಬೆಲ್ಲ
ಸೋಡಾ

**ಮಾಡುವ ಕ್ರಮ**

2 ಗಂಟೆ ನೆನ್‌ದ ಅಕ್ಕಿನ ಆಡ್ಸಿ ಅದಕ್ಕೆ ಉಪ್ಪು, ಬೆಲ್ಲ ಹಾಕಿ ಪುನಃ ಆಡಿಸಿ ತೆಳು ಆದಮೇಲೆ ಸೋಡಾ 1 ಚಿಟಿಕೆ ಹಾಕಿ 1 ಗಂಟೆ ಬಿಟ್ಟ್ ಅಪ್ಪದ ಕಾವಲಿಗೆ ಎಣ್ಣೆ ಸವರಿ ಒಂದೊಂದೇ ಚಮಚ ಹಾಕಿ, ಬೆಂದ ಮೇಲೆ ಇಳ್‌ಸೊಕು.

